# ವಿದುರನೀತಿಸಾರ



ವೇದಾಂತ ಸಾರ್ವಭೌಮ, ಮಹಾಮಹೋಪಾಧ್ಯಾಯ

ವಿದ್ವಾನ್ ಡಾ|| ಕೆ. ಜಿ. ಸುಬ್ರಾಯಶರ್ಮಾ




"ಪಂಚಕ ಪಂಚಕಂ"-88 ಗ್ರಂಥದ ಲೋಕಾರ್ಪಣ ಸಮಾರಂಭದಲ್ಲಿ ಶ್ರೀಯುತ ಚಂದ್ರಶೇಖರ ಕಾಮತ್, ಶ್ರೀ ಶಾಂತಾರಾಂ ಕೆ. ಶಾನಭಾಗ್, ಶ್ರೀ ಹೆಚ್. ಎಸ್. ಗೋಪಾಲಕೃಷ್ಣ, ಶ್ರೀ ಎಂ. ಕೆ. ಶ್ರೀನಿವಾಸ್ ಇವರೊಂದಿಗೆ ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾದಂಪತಿಗಳು; 23-8-2017 ಬುಧವಾರ



"ಪಂಚಕ ಪಂಚಕಂ"-88 ಕೃತಿರತ್ನದ ಲೋಕಾರ್ಪಣ ಸಮಾರಂಭದಲ್ಲಿ ವೇದಾಂತಭಾಷ್ಯಪಾಠಶ್ರೋತೃಗಳು; 23-8-2017 ಬುಧವಾರ

ಆನಂದಗ್ರಂಥಮಾಲಾ–ಕುಸುಮ 98

# ವಿದುರನೀತಿಸಾರ

**ಪ್ರವಚನಕಾರರು ಮತ್ತು ಲೇಖಕರು**
ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ, ಅದ್ವೈತಜ್ಞಾನಸಿಂಧು, ವಿದ್ಯಾವಿಧಿನಿಧಿ,
ವೇದಶ್ರೀ, ವೇದಾಂತವಾರಿಧಿ, ವೇದಾಂತಭಾಸ್ಕರ, ವೇದಾಂತಸರಸ್ವತಿ, ವೇದಾಂತಕೇಸರಿ,
ವೇದಾಂತ ಸಾರ್ವಭೌಮ, ವೇದಾಂತಕಾಮಧೇನು, ವೇದಾಂತರಾಜಹಂಸ, ವಿವೇಕ ಭಾಸ್ಕರ,
ಶಾಸ್ತ್ರನಿಧಿ, ಅದ್ವೈತವೇದಾಂತಕೇಸರಿ, ಅದ್ವೈತಜ್ಞಾನತೇಜ, ವೇದಾಂತಸಾಗರ, ವೇದಾಂತರತ್ನ,
ಶಾಸ್ತ್ರವಿದ್ಯಾನಿಧಿ, ವೇದಾಂತಚಿಂತಾಮಣಿ, ಅದ್ವೈತಸಾರತಿಲಕ, ವೇದಾಂತಪ್ರಭಾಕರ,
ಅದ್ವೈತ ವೇದಾಂತವಾರಿಧಿ, ಅದ್ವೈತವೇದಾಂತಚೂಡಾಮಣಿ, ಅದ್ವೈತವೇದತಿಲಕ,
ಅದ್ವೈತ ವೇದಾಂತವಿಚಕ್ಷಣ, ವೇದಾಂತಸಾರತಿಲಕ, ವೇದಾಗಮವಿದ್ಯಾಸಾಗರ,
ಸುವರ್ಣಕರ್ನಾಟಕ ಕನ್ನಡಿಗ, ಭುವಿ ವೇದಾಂತೈಕಶ್ರೇಷ್ಠರತ್ನ, ರಾಷ್ಟ್ರರತ್ನ,
ಸುವರ್ಣಕರ್ನಾಟಕ ಸುವರ್ಣವೇದಾಂತಿ, ವೇದಾಂತರತ್ನಾಕರ, ಸ್ವರ್ಣಭೂಷಣ,
ವೇದಾಂತಗಂಗಾಧರ, ಅದ್ವೈತವೇದಾಂತವಾಚಸ್ಪತಿ, ಅದ್ವೈತವೇದಾಂತಶಿಖಾಮಣಿ,
ಗೋವಿಂದಲಕ್ಷ್ಮೀಪುರಸ್ಕಾರ, ಬಸವನಗುಡಿರತ್ನ, ಶ್ರೀ ಶ್ರೀ ಸದ್ಗುರುಹೃದಯಭಾಸ್ಕರ,
ಅದ್ವೈತವೇದಾಂತ ಸವ್ಯಸಾಚಿ, ಸದ್ಗುರು ಸೇವಾ ಧುರೀಣ, ಪರಿಪೂರ್ಣ ಮಹನೀಯ ೨೦೧೨,
ಮಂತ್ರಾಲಯದ ಶ್ರೀಶ್ರೀಸುಶಮೀಂದ್ರತೀರ್ಥಸ್ವಾಮೀಜಿ **"ರಾಷ್ಟ್ರೀಯ ಜ್ಞಾನ ಪುರಸ್ಕಾರ"**,
ಅದ್ವೈತ ವೇದಾಂತ ಪ್ರತಿಭಾ ಪ್ರಕಾಶ, ಜಿಜ್ಞಾಸುಕಾಮಧೇನು, ಮುಮುಕ್ಷುಮೋಕ್ಷಧೇನು,
ಉಪನಿಷದ್ ರತ್ನಾಕರ, ಶ್ರೀ ಸಿದ್ಧಾರೂಢ ಸದ್ಭಾವನಾ ಪ್ರಶಸ್ತಿ, ವೇದಾಂತ ಪ್ರವಚನ ಚತುರ,
ವೇದಾಂತ ಪರುಷಮಣಿ, ಶಾಂಕರಾದ್ವೈತವೇದಾಂತಾಚಾರ್ಯ, ಅದ್ವೈತವೇದಾಂತಸಾರಥಿ,
ಶ್ರೀಪ್ರಸನ್ನಗಣಪತಿ (ಬಲಮುರಿ) ಅನುಗ್ರಹ ಪ್ರಶಸ್ತಿ—೨೦೧೫, ಪ್ರಾಜ್ಞ ವೇದಾಂತ ಯೋಗ,
ವೇದಾಂತ ಚಕ್ರವರ್ತಿ, ಸರ್ವಋತು ಪ್ರವಚನಕಾರ, ವೇದಾಂತವಿದ್ಯಾಕೌಸ್ತುಭ,
ಅಧ್ಯಾತ್ಮ ಪ್ರವಚನ ಭೂಷಣ, "೭೦ರ ವೀರ ವೇದಾಂತಿ",
ಬ್ರಹ್ಮವಿದ್ಯಾಪಾರಂಗತ, ವೇದ ವಾರಿಧಿ, ಸಹೃದಯ ಅಧ್ಯಾತ್ಮ ಚಿಂತಕ
**ಸುವರ್ಣ ಕರ್ನಾಟಕ "ರಾಜ್ಯೋತ್ಸವ ಪ್ರಶಸ್ತಿ"—೨೦೦೫**, ಮತ್ತು
**"ಸುವರ್ಣ ಕರ್ನಾಟಕ ಸಾಹಿತ್ಯ ಪ್ರಶಸ್ತಿ"** ಪುರಸ್ಕೃತ, **ಶಾಂಕರಭಾಷ್ಯಭಾಸ್ಕರ**
**ಅದ್ವೈತ ವಾಚಸ್ಪತಿ, ಮಹಾಮಹೋಪಾಧ್ಯಾಯ ವೇ. ಬ್ರ. ಶ್ರೀ ವಿದ್ವಾನ್**
**ಡಾ॥ ಕೆ. ಜಿ. ಸುಬ್ರಾಯಶರ್ಮಾ**, ಎಂ.ಎ., ಡಿ.ಲಿಟ್.
**(ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳ ಅಂತೇವಾಸಿ ಸಾಕ್ಷಾತ್‌ಶಿಷ್ಯರು)**

**ಶ್ರೀ ನಿತ್ಯಾನಂದ ಪ್ರಿಂಟರ್ಸ್**
ಅಶೋಕನಗರ, ಬೆಂಗಳೂರು - 560 050
**ಮೇ 2018**

**“ವಿದುರನೀತಿಸಾರ” – 98**
“VIDURANEETISAARA” – 98
**98th** Flower in the ‘**Aananda Grantha Maalaa**’ Series
*by* Vedanta Chakravarthi, **Mahaamahopaadhyaaya**
Vidwan **Dr. K. G. SUBRAYA SHARMA, M.A., D.Litt.**
# 127, “**Seetha-Preethi**”, Balaji Nagar,
ICICI Bank Cross Road, Uttarahalli Main Road
**P. O. Subrahmanyapura, Bengaluru - 560 061**
**Ph : 080-2639 6786 ; Mobile : 98862 81622**
e-mail: kgssharma@gmail.com

Published by
**Sri Nithyananda Printers**
No. 46, 4th Cross, Ashoknagar
Bengaluru - 560 050; Ph: 080 - 2242 6027

**Pages: 48; Price: Rs. 40/- ; ಬೆಲೆ: ರೂ. 40/-**

**First Edition : May 2018 ; 1000 Copies**






Printed by
B. N. Nataraj
Sri Nithyananda Printers
# 46, 4th Cross, Ashoknagar, BSK 1st Stage
Bengaluru - 560 050. ✆ 2242 6027

# ನಮೋ ನಮಃ ಸದ್ಗುರುಪಾದುಕಾಭ್ಯಾಮ್

**ನನ್ನ ಪೂಜ್ಯ ಸದ್ಗುರುಗಳಾದ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಮಹಾಸ್ವಾಮಿಗಳವರಿಗೆ** ನನ್ನ ಅಂತರಂಗದ ಭಕ್ತಿಪೂರ್ವಕ ಪ್ರಣಾಮಗಳು. ಯತಿಪುಂಗವರೂ ಆಚಾರವಿಚಾರನಿಷ್ಠರೂ ಪರಿಶುದ್ಧತತ್ತ್ವವೇದಾಂತಿಗಳೂ ಆಗಿದ್ದ ಸದ್ಗುರುಗಳು ನನಗೆ ಅನೇಕ ಸುಭಾಷಿತಗಳನ್ನು ಹೇಳಿ ಗಟ್ಟುಮಾಡಿಸಿರುತ್ತಾರೆ. ರಘುವಂಶ, ಕುಮಾರಸಂಭವ, ರಾಮಾಯಣ, ಭಾಗವತ, ಭಾರತ, ಪುರಾಣಗಳಿಂದ ಆರಿಸಿದ ಕೆಲವು ಸುಭಾಷಿತಗಳನ್ನು ಸಂದರ್ಭಾನುಸಾರ ನನಗೆ ಹೇಳಿರುತ್ತಾರೆ. ಕೆಲವು ಸುಭಾಷಿತಗಳನ್ನು ಹೇಳುವಾಗ ಸದ್ಗುರುಗಳು "ಇದು ಮಹಾಭಾರತದ ವಿದುರನೀತಿಯಲ್ಲಿರುವ ಸುಭಾಷಿತ, ಚೆನ್ನಾಗಿದೆ, ಗಟ್ಟುಮಾಡು ಮಗೂ" ಎಂದು ಹೇಳುತ್ತಿದ್ದರು.

ಗುರುಗಳೇ ನನ್ನನ್ನು ಕೂರಿಸಿಕೊಂಡು ಅವರ ಸಂನಿಧಾನದಲ್ಲಿಯೇ ನನ್ನಿಂದ ಮಹಾಭಾರತದ ಕೆಲವು ಅಧ್ಯಾಯಗಳನ್ನೂ ಉಪನ್ಯಾಸಮಾಡಿಸಿರುತ್ತಾರೆ. ಶುದ್ಧ ವೇದಾಂತಿಗಳೇ ಆಗಿದ್ದರೂ ಸದ್ಗುರುಗಳಿಗೆ ಪುರಾಣ, ರಾಮಾಯಣ, ಭಾರತ ಗ್ರಂಥಗಳೆಂದರೆ ತುಂಬಾ ಆಸಕ್ತಿಯೂ ಪ್ರೀತಿಯೂ ಇರುತ್ತಿತ್ತು. ರಾಮಾಯಣ ಮಹಾಭಾರತಗಳಿಂದ ಆರಿಸಿದ ಕೆಲವು ಶ್ಲೋಕಗಳನ್ನು ನನಗೆ ಸದ್ಗುರುಗಳು ನನ್ನ ಗುರುಕುಲವಾಸದ ಸಮಯದಲ್ಲಿ ಗಟ್ಟುಮಾಡಿಸಿರುತ್ತಾರೆ. ಸದ್ಗುರುಗಳು ತಮ್ಮ ಉಪನ್ಯಾಸಗಳಲ್ಲಿಯೂ ಸಂದರ್ಭಾನುಸಾರ ಅಲ್ಲಲ್ಲಿ **ವಿದುರನೀತಿಯ ಕೆಲವು ಶ್ಲೋಕಗಳನ್ನು** ಉದಾಹರಿಸುತ್ತಿದ್ದರು.

**ಮಹಾಭಾರತದ ಉದ್ಯೋಗಪರ್ವದಲ್ಲಿ** ಬರುವ, ಸುಮಾರು ಆರು ನೂರು ಶ್ಲೋಕಗಳಿರುವ **ವಿದುರನೀತಿ**ಗಳಿಂದ ನಾನಿಲ್ಲಿ ಕೇವಲ ನಲವತ್ತು ಶ್ಲೋಕಗಳನ್ನು ಸಂಗ್ರಹಿಸಿ, ಭಾವಾರ್ಥ ಹಾಗೂ ವಿವರಣೆಗಳನ್ನು **"ವಿದುರನೀತಿಸಾರ"** ಎಂಬೀ ಗ್ರಂಥದಲ್ಲಿ ಕೊಟ್ಟಿರುತ್ತೇನೆ. ಆಸಕ್ತರು ಮಹಾಭಾರತದಲ್ಲಿ ಉದ್ಯೋಗ ಪರ್ವದಲ್ಲಿರುವ ಆ ಆರುನೂರೂ ಶ್ಲೋಕಗಳನ್ನು ಅಧ್ಯಯನಮಾಡಿದಾಗ ಇನ್ನೂ ಹೆಚ್ಚಿನ ಆನಂದವು ಉಂಟಾಗುವುದರಲ್ಲಿ ಸಂಶಯವಿಲ್ಲ. ಸದ್ಗುರು ಅನುಗ್ರಹದಿಂದ ಬರೆದಿರುವ ಈ ಗ್ರಂಥವನ್ನು ಸದ್ಗುರುಗಳ ಪಾದಗಳಿಗೇ ಭಕ್ತಿಯಿಂದ ಸಮರ್ಪಿಸಿರುತ್ತೇನೆ. ಇದರಿಂದ ವಾಚಕರಿಗೆ ಪ್ರಯೋಜನವಾದರೆ ನನ್ನ ಈ ಶ್ರಮವು ಸಾರ್ಥಕವಾದಂತೆ ಎಂದು ಭಾವಿಸುತ್ತೇನೆ.

**॥ ನಮೋ ನಮಃ ಸದ್ಗುರುಪಾದುಕಾಭ್ಯಾಮ್ ॥**

30-4-2018, ಸೋಮವಾರ, **ಬುದ್ಧಜಯಂತಿ** — **ಕೆ. ಜಿ. ಸುಬ್ರಾಯಶರ್ಮಾ**
127, 'ಸೀತಾಪ್ರೀತಿ', ಬಾಲಾಜಿನಗರ — ಉತ್ತರಹಳ್ಳಿ, ಬೆಂಗಳೂರು-61

# ವಿದುರನೀತಿಸಾರ

ಪ್ರಿಯ ವಾಚಕರೆ, ಇದೀಗ ನಿಮ್ಮ ಕರಗಳಲ್ಲಿ ಇರುವ ಗ್ರಂಥದ ಹೆಸರು **"ವಿದುರನೀತಿಸಾರ"** ಎಂದು. ಧರ್ಮನೀತಿನಿಪುಣನಾದ ವಿದುರನು ಧೃತರಾಷ್ಟ್ರನಿಗೆ ಉಪದೇಶಿಸಿದ ನೀತಿಗಳ ಸಂಗ್ರಹವೇ ಈ **ವಿದುರನೀತಿಸಾರ** ಎಂಬ ಗ್ರಂಥದ ವಿಷಯ. ದುಃಖಶೋಕಚಿಂತೆಗಳಲ್ಲಿ ಮುಳುಗಿದ್ದ ಧೃತರಾಷ್ಟ್ರನ ಅಪೇಕ್ಷೆಯಂತೆ ವಿದುರನು ಧೃತರಾಷ್ಟ್ರನಿಗೆ ವಿಸ್ತಾರವಾಗಿ ನೀತಿಗಳನ್ನು ತಿಳಿಸಿರುತ್ತಾನೆ. ಈ ನೀತಿಗಳು ಸಾರ್ವಕಾಲಿಕ ಹಾಗೂ ಸಾರ್ವದೇಶಿಕ, ಸಾರ್ವತ್ರಿಕಮೌಲ್ಯಗಳಿಂದ ಕೂಡಿರುತ್ತವೆ. ಮಾನವರಿಗೆ ಜೀವನದಲ್ಲಿ ಬರಬಹುದಾದ ದುಃಖಕಷ್ಟಪರಂಪರೆಗಳಿಗೆ ಪರಿಹಾರೋಪಾಯವನ್ನು ಈ ನೀತಿಗಳು ಉಪದೇಶಿಸುತ್ತವೆ.

ಶ್ರೀಮನ್ಮಹಾಭಾರತದ **ಉದ್ಯೋಗಪರ್ವ**ದಲ್ಲಿ ಈ **ವಿದುರನೀತಿ**ಯು ಬರುತ್ತದೆ. ಸುಮಾರು ಎಂಟು ಅಧ್ಯಾಯಗಳಲ್ಲಿ ಒಟ್ಟು ಸುಮಾರು ೬೦೦ ಶ್ಲೋಕಗಳಲ್ಲಿ ಈ ವಿದುರನೀತಿಯ ಭಾಗವು ಇರುತ್ತದೆ. ಈ **ವಿದುರನೀತಿ**ಯು ಮಾನವರನ್ನು ಸಂಕಷ್ಟಗಳಿಂದ ಮೇಲಕ್ಕೆತ್ತುತ್ತದೆ; ಧೈರ್ಯ, ಉತ್ಸಾಹ, ಶಾಂತಿ, ವಿವೇಕಗಳನ್ನು ಉಂಟುಮಾಡುತ್ತದೆ. ನೀತಿಪ್ರಧಾನವಾದ ಈ ವಿದುರನೀತಿಗಳು ಮನುಷ್ಯರಿಗೆ ಅತ್ಯಂತ ಉಪಯುಕ್ತವಾಗಿರುತ್ತವೆ. ವಿದುರನೀತಿಯಲ್ಲಿರುವ ಎಲ್ಲಾ ಶ್ಲೋಕಗಳೂ ಸುಭಾಷಿತಕ್ಕೆ ಸಮಾನವಾಗಿರುತ್ತವೆ. ಅನೇಕ ವಿದ್ವಾಂಸರು ಹಾಗೂ ಉಪನ್ಯಾಸಪಟುಗಳು ಈ ವಿದುರನೀತಿಯಿಂದ ಅನೇಕ ಶ್ಲೋಕಗಳನ್ನು ಸಂದರ್ಭಾನುಸಾರವಾಗಿ ಉದಾಹರಿಸುತ್ತಲೂ ಇರುತ್ತಾರೆ.

ಪ್ರಕೃತ, **ವಿದುರನೀತಿಸಾರ** ಎಂಬೀ ಗ್ರಂಥದಲ್ಲಿ ನಾನು ಕೇವಲ ನಲವತ್ತು ಶ್ಲೋಕಗಳನ್ನು ಮಾತ್ರ ಸಂಗ್ರಹಿಸಿ, ಶ್ಲೋಕಗಳು, ಭಾವಾರ್ಥ, ವಿವರಣೆಗಳನ್ನು ಕೊಟ್ಟಿರುತ್ತೇನೆ. ಇಂದಿನ ಕಾಲದಲ್ಲಿ, ಇಪ್ಪತ್ತೊಂದನೆಯ ಶತಮಾನದಲ್ಲಿ ನೀತಿಧರ್ಮನ್ಯಾಯಗಳೇ ಮಾಯವಾಗುತ್ತಿವೆ. ಆದ್ದರಿಂದಲೇ ಎಲ್ಲೆಡೆಗಳಲ್ಲಿಯೂ ಅಶಾಂತಿ, ಹಿಂಸಾಚಾರ, ಗಲಾಟೆಗಳು ಮೆರೆಯುತ್ತಿವೆ. ಇಂಥ ಸಂಕಟದಲ್ಲಿ **ವಿದುರನೀತಿಸಾರ** ಎಂಬೀ ಗ್ರಂಥವು ಬಾಲಕರು, ವಿದ್ಯಾರ್ಥಿಗಳು, ಸ್ತ್ರೀಯರು, ವಿದ್ವಾಂಸರು, ರಾಜಕಾರಣಿಗಳು, ಯತಿಗಳು—ಎಲ್ಲರಿಗೂ ಶಾಂತಿ ಸಮಾಧಾನಗಳನ್ನು ಉಂಟುಮಾಡುವುದರಲ್ಲಿ ಸಂಶಯವಿಲ್ಲ. ಇದನ್ನು ಪ್ರೀತಿಯಿಂದ ಮುದ್ರಿಸಿಕೊಟ್ಟಿರುವ ಪ್ರೀತಿಯ ಸನ್ಮಿತ್ರರಾದ ಶ್ರೀ ಬಿ. ಎನ್. ನಟರಾಜ್‌ರವರಿಗೆ ನನ್ನ ಕೃತಜ್ಞತೆಗಳನ್ನು ಈ ಮೂಲಕ ತಿಳಿಸುತ್ತಿದ್ದೇನೆ.

30-4-2018, ಸೋಮವಾರ, **ಬುದ್ಧಜಯಂತಿ**

**ಕೆ. ಜಿ. ಸುಬ್ರಾಯಶರ್ಮಾ**
ಉತ್ತರಹಳ್ಳಿ, ಬೆಂಗಳೂರು-61
☎ 2639 6786;  98862 81622

# “ವಿದುರನೀತಿಸಾರ”ದ ಅಂತರಂಗ

# 1. ಸಂಪತ್ತಿಗೆ ಆಶ್ರಯಗಳಿವು

ಧೃತಿಃ ಶಮೋ ದಮಃ ಶೌಚಂ ಕಾರುಣ್ಯಂ ವಾಗನಿಷ್ಠುರಾ।
ಮಿತ್ರಾಣಾಂ ಚಾನಭಿದ್ರೋಹಃ ಸಪ್ತೈತಾಃ ಸಮಿಧಃ ಶ್ರಿಯಃ॥

*ಧೃತಿ, ಶಮ, ದಮ, ಶೌಚ, ಕಾರುಣ್ಯ, ಮಧುರವಾದ ಮಾತು, ಮಿತ್ರರಿಗೆ ದ್ರೋಹಮಾಡದಿರುವುದು—ಈ ಏಳೂ ಸದ್ಗುಣಗಳು ಸಂಪತ್ತಿಗೆ ಆಶ್ರಯಗಳು.*

ಈ ಕೆಳಗಿನ ಏಳು ಸದ್ಗುಣಗಳು ಸಂಪತ್ತಿಗೆ ಆಶ್ರಯವಾಗಿರುತ್ತವೆ. ಅಂದರೆ, ಈ ಏಳು ಗುಣಗಳಿದ್ದಲ್ಲಿ ಸಂಪತ್ತುಗಳು ತಾವುತಾವಾಗಿಯೇ ಬರುತ್ತವೆ. ಅವುಗಳು ಯಾವುವು? ಎಂದರೆ:

೧. **ಧೃತಿ: ಧೃತಿ** ಎಂದರೆ ಧೈರ್ಯ. ಎಂಥ ಕಷ್ಟಸಂದರ್ಭದಲ್ಲಿಯೂ ಮಾನವನು ಧೈರ್ಯಶಾಲಿಯಾಗಿ, ವಿವೇಕದಿಂದ ಬಾಳಬೇಕು.

೨. **ಶಮ: ಶಮ** ಎಂದರೆ ಶಾಂತಮನಸ್ಸು. ಮನಸ್ಸನ್ನು ಯಾವಾಗಲೂ ಶಾಂತವಾಗಿರಿಸಿಕೊಂಡು, ಪ್ರಸನ್ನನಾಗಿರುವುದನ್ನು ಕಲಿಯಬೇಕು.

೩. **ದಮ: ದಮ** ಎಂದರೆ ಇಂದ್ರಿಯನಿಗ್ರಹ. ಇಂದ್ರಿಯನಿಗ್ರಹವನ್ನು ಯಾವಾಗಲೂ ಮಾನವರು ಮಾಡುತ್ತಿರಬೇಕು.

೪. **ಶೌಚ: ಶೌಚ** ಎಂದರೆ ಒಳಗಡೆಯಲ್ಲೂ ಹೊರಗಡೆಯಲ್ಲಿಯೂ ಶುದ್ಧವಾಗಿರುವುದು. ಇದಕ್ಕೇ **ಆರ್ಜವ** ಎಂದೂ ಹೆಸರಿದೆ.

೫. **ಕಾರುಣ್ಯ: ಕಾರುಣ್ಯ** ಎಂದರೆ ದೀನದರಿದ್ರರಲ್ಲಿ ದಯೆ, ಅನುಕಂಪೆ. ಕುರುಡ, ಕುಂಟರನ್ನು ಕಂಡಾಗ ಅವರಲ್ಲಿ ಪ್ರೀತಿಯನ್ನು ತೋರಿಸಬೇಕು.

೬. **ಅನಿಷ್ಠುರಾ ವಾಕ್**: ಮೃದುವಾದ ಮಾತು. ಎಂದಿಗೂ ಯಾರೊಂದಿಗೂ ನಿಷ್ಠುರವಾದ ಮಾತನ್ನು ಆಡಲೇಬಾರದು; ಮಾತೆಂಬುದು ಮುತ್ತಿನಂತೆ ಇರಬೇಕು. ಮಾತು ಮೃದು, ಮಧುರ, ಪ್ರಿಯ, ಹಿತವಾಗಿರಬೇಕು.

೭. **ಮಿತ್ರಾಣಾಮ್ ಅನಭಿದ್ರೋಹಃ:** ಮಿತ್ರರಿಗೆ ದ್ರೋಹವನ್ನು ಮಾಡಬಾರದು. ಮಿತ್ರದ್ರೋಹವು ಮಹಾಪಾಪ. ಇದನ್ನು ಮಾಡಲೇ ಬಾರದು.

ಈ ಮೇಲಿನ ಏಳೂ ಸದ್ಗುಣಗಳು ಯಾರಲ್ಲಿ ಇರುತ್ತವೆಯೋ ಅಂಥವರ ಹತ್ತಿರಕ್ಕೆ ಸಕಲಸಂಪತ್ತುಗಳೂ ಬಂದು ಸೇರುತ್ತವೆ. ಆದ್ದರಿಂದ ವಿವೇಕಿಗಳು ಈ ಏಳೂ ಸದ್ಗುಣಗಳನ್ನು ಪ್ರಯತ್ನಪೂರ್ವಕವಾಗಿ ಸಂಪಾದಿಸಿಕೊಳ್ಳಬೇಕು.

**ಧೃತಿ ಮುಂತಾದ ಸದ್ಗುಣಗಳನ್ನು ಸಂಪಾದಿಸಿಕೊಳ್ಳಬೇಕು**

## 2. ಇಂಥವನಿಗೆ ಸುಖವು ಸಿಗುತ್ತದೆ

ಯೋ ಜ್ಞಾತಿಮನುಗೃಹ್ಣಾತಿ ದರಿದ್ರಂ ದೀನಮಾತುರಮ್ ।
ಸ ಪುತ್ರಪಶುಭಿರ್ವೃದ್ಧಿಂ ಶ್ರೇಯಶ್ಚಾನಂತಮಶ್ನುತೇ ॥

*ಯಾವನು ಜ್ಞಾತಿಯನ್ನೂ ದರಿದ್ರನನ್ನೂ ದೀನನನ್ನೂ ಮತ್ತು ರೋಗಿಯನ್ನೂ ಅನುಗ್ರಹಿಸುತ್ತಾನೆಯೋ, ಅಂಥವನು ಪುತ್ರ ಪಶು ಸಂಪತ್ತುಗಳ ಅಭಿವೃದ್ಧಿಯನ್ನೂ ಅನಂತವಾದ ಸುಖಶಾಂತಿಗಳನ್ನೂ ಹೊಂದುತ್ತಾನೆ.*

ಇಂಥವರಿಗೆ ಪುತ್ರಪಶುಸಂಪತ್ತುಗಳೆಲ್ಲವೂ ಉಂಟಾಗುತ್ತವೆ:

೧. **ಜ್ಞಾತಿಗಳನ್ನೂ ಪ್ರೀತಿಮಾಡುವವರಿಗೆ:** ಜ್ಞಾತಿಗಳೆಂದರೆ ದಾಯಾದಿಗಳು. ಅವರಿಗೆ ನಮ್ಮ ಮೇಲೆ ಪ್ರೀತಿಯಾಗಲೀ ವಿಶ್ವಾಸವಾಗಲೀ ಇರುವುದಿಲ್ಲ. ಏಕೆಂದರೆ ಅವರು ನಮಗೆ ದಾಯಾದಿಗಳು ಎಂದರೆ ಶತ್ರುಸಮಾನರು. ಆದರೂ ಅಂಥವರನ್ನೂ ನಾವು ಪ್ರೀತಿಮಾಡಬೇಕೆಂದರೆ ಅದೊಂದು ದೊಡ್ಡ ತಪಸ್ಸಲ್ಲವೇ? ತಮ್ಮ ಶತ್ರುಗಳನ್ನೂ ಪ್ರೀತಿಸುವವರಿಗೆ ಸಕಲ ಸಂಪತ್ತುಗಳೂ ಉಂಟಾಗುವುದರಲ್ಲಿ ಸಂಶಯವಿಲ್ಲ.

೨. **ದರಿದ್ರರನ್ನು ಪ್ರೀತಿಸುವವರಿಗೆ:** ದರಿದ್ರರೆಂದರೆ ಬಡವರು. ಸಾಮಾನ್ಯವಾಗಿ ಬಡವರನ್ನು ಸಮಾಜವು ಪ್ರೀತಿಸುವುದಿಲ್ಲ. ದರಿದ್ರರನ್ನು ಕಂಡರೆ ಜನಗಳು ದೂರವಿರುತ್ತಾರೆ. ಬಡತನವೇ ದರಿದ್ರರಿಗೆ ಶಾಪ. ಆದರೂ ಇಂಥ ಬಡವರನ್ನೂ ಪ್ರೀತಿಸುವವರಿಗೆ ಸಕಲಸಂಪತ್ತುಗಳುಂಟಾಗುತ್ತವೆ.

೩. **ದೀನರನ್ನು ಪ್ರೀತಿಸುವವರಿಗೆ:** ದೀನರೆಂದರೆ ಕೇರ್ ಆಫ್ ಫುಟ್‌ಪಾತ್ ಆದವರು. ಬಡತನದ ಜೊತೆಗೆ ದಿಕ್ಕಿಲ್ಲದವರೇ ದೀನರು. ವಿದ್ಯೆಯಾಗಲೀ ಸಂಪತ್ತಾಗಲೀ ಇಲ್ಲದೇ, ರಕ್ಷಕರೂ ಇಲ್ಲದೇ, ಬೀದಿಪಾಲಾಗಿರುವವರೇ ದೀನರು. ಇಂಥವರನ್ನು ಸಮಾಜವು ತಿರಸ್ಕರಿಸುತ್ತದೆ. ಇಂಥವರನ್ನೂ ಪ್ರೀತಿಸಬೇಕೆಂದರೆ ಅವನು ನಿಜಕ್ಕೂ ಮಹಾತ್ಮನಾಗಿರಬೇಕು. ಅಂಥ ಮಹಾತ್ಮನಿಗೆ ಸಂಪಲ್ಲಕ್ಷ್ಮಿಯು ಖಂಡಿತವಾಗಿಯೂ ಒಲಿಯುತ್ತಾಳೆ.

೪. **ಆತುರನನ್ನು ಪ್ರೀತಿಸುವವನಿಗೆ:** ಆತುರರೆಂದರೆ ರೋಗಿಷ್ಠರು. ಕುಷ್ಠ ರೋಗಿಗಳನ್ನೂ, ಕ್ಷಯರೋಗಿಗಳನ್ನೂ ಸಾಮಾನ್ಯವಾಗಿ ಜನಗಳು ದೂರಮಾಡುತ್ತಾರೆ. ಆದರೆ ಇವರನ್ನೂ ಪ್ರೀತಿಸಬೇಕೆಂದರೆ ಅವನು ಆತ್ಮಜ್ಞಾನಿಯೇ ಆಗಿರಬೇಕು. ಇಂಥವನನ್ನು ಸಂಪತ್ತುಗಳು ವರಿಸುತ್ತವೆ.

**ದೀನರನ್ನೂ ರೋಗಿಗಳನ್ನೂ ನಾವುಗಳು ಪ್ರೀತಿಮಾಡಬೇಕು**

# 3. ಮಾತು ಮೃದುವಾಗಿರಬೇಕು

ಅಭ್ಯಾವಹತಿ ಕಲ್ಯಾಣಂ ವಿವಿಧಂ ವಾಕ್ ಸುಭಾಷಿತಾ।
ಸೈವ ದುರ್ಭಾಷಿತಾ ನೂನಮ್ ಅನರ್ಥಾಯೋಪಪದ್ಯತೇ॥

*ಮೃದುಮಧುರವಾಗಿ ಆಡಿದ ಮಾತುಗಳು ವಿಧವಿಧವಾದ ಮಂಗಳಗಳನ್ನು ತಂದು ಕೊಡುತ್ತವೆ. ಆದರೆ ಅದೇ ಮಾತುಗಳೇನಾದರೂ ಒರಟಾಗಿ ಹೇಳಲ್ಪಟ್ಟಾಗ ಖಂಡಿತವಾಗಿಯೂ ಅನರ್ಥಗಳನ್ನೇ ಉಂಟುಮಾಡುತ್ತವೆ.*

ಮಾತು! ಮಾತಿನ ಮಹಿಮೆ ಅದ್ಭುತ! ಭಗವಂತನು ಮಾನವರಿಗೆ ಕೊಟ್ಟಿರುವ ಅದ್ಭುತಶಕ್ತಿ ಎಂದರೆ ಮಾತು. ಮಾತೇ ಸಕಲ ಮಾನವರ ಸಂಪತ್ತು. **ಮಾತೇ ಮುತ್ತು, ಮಾತೇ ಮೃತ್ಯು**! ನೆನಪಿರಲಿ. ಮಾತಿನಿಂದಲೇ ಸ್ವರ್ಗ, ಮಾತಿನಿಂದಲೇ ನರಕ; ಮಾತಿನಿಂದಲೇ ಆನಂದ, ಮಾತಿನಿಂದಲೇ ದುಃಖ; ಮಾತಿನಿಂದಲೇ ತೃಪ್ತಿ, ಮಾತಿನಿಂದಲೇ ಅತೃಪ್ತಿ; ಮಾತಿನಿಂದಲೇ ಆರೋಗ್ಯ, ಮಾತಿನಿಂದಲೇ ರೋಗ; ಮಾತಿನಿಂದಲೇ ಸ್ನೇಹ, ಮಾತಿನಿಂದಲೇ ದ್ವೇಷ. ಇಂಥ ಮಾತನ್ನು ಮಾನವನು ಎಚ್ಚರಿಕೆಯಿಂದ, ಸಂಯಮದಿಂದ ಬಳಸಬೇಕು. ಹಿಂದೂ ಮುಂದೂ ಆಲೋಚನೆಮಾಡಿಯೇ ಮಾತುಗಳನ್ನಾಡಬೇಕು.

ಏಕೆಂದರೆ: ಮೃದುವಾಗಿ, ಮಧುರವಾಗಿ, ಪ್ರೀತಿಯಿಂದ ಮಾತನಾಡಿದರೆ ಅದರಿಂದ ಕಲ್ಯಾಣಪರಂಪರೆಗಳೇ ಉಂಟಾಗುತ್ತವೆ. ಗುರುಗಳು ಶಿಷ್ಯರುಗಳನ್ನು ಪ್ರೀತಿಯಿಂದ ನಗುನಗುತ್ತಾ ಮಾತನಾಡಿಸಿದರೆ, ಅದರಿಂದ ಶಿಷ್ಯರುಗಳಿಗೂ ಗುರುಗಳಿಗೂ—ಇಬ್ಬರಿಗೂ ಎಷ್ಟು ಆನಂದ! ಎಂಥಾ ಸಂತೋಷವಾಗುತ್ತೆ! ಸಮಾಜದಲ್ಲಿ ಪ್ರತಿಷ್ಠಿತವ್ಯಕ್ತಿಯು ಆದಷ್ಟೂ ಮೃದುಮಧುರವಾದ ಮಾತುಗಳನ್ನೇ ಆಡುತ್ತಿದ್ದರೆ ಅಂಥ ಸಮಾಜವು ಎಷ್ಟು ಸಂತೋಷವಾಗಿರುತ್ತದೆ? ಆದರೆ ಮೃದುಮಧುರವಾದ ಪ್ರೀತಿಯ ಮಾತುಗಳನ್ನಾಡುವುದಕ್ಕೂ ಸಂಯಮವು ಬೇಕಲ್ಲವೇ?

ಇನ್ನು, ಇದೇ ಮಾತುಗಳು ಒರಟಾಗಿ, ಖಾರವಾಗಿ, ಕೋಪಾವಿಷ್ಟವಾಗಿ ಬಿಟ್ಟರೆ, ಅದರಿಂದ ತುಂಬಾ ಅನರ್ಥಗಳೇ ಉಂಟಾಗುತ್ತವೆ. ಒಮ್ಮೆ ಕೋಪದಿಂದ ಮಾತುಗಳನ್ನು ಆಡಿಬಿಟ್ಟರೆ ಆ ಮಾತುಗಳನ್ನು ವಾಪಸ್ಸು ತೆಗೆದುಕೊಳ್ಳುವುದಕ್ಕೆ ಆಗುವುದಿಲ್ಲ. **ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯ್ತು.** ಒಂದು ಕೆಟ್ಟ ಮಾತಿನಿಂದ ಸ್ನೇಹವೇ ಕಳಚಿಬೀಳುತ್ತದೆ, ಒಂದು ಕೆಟ್ಟ ಮಾತಿನಿಂದ ವಂಶವೇ ನಿರ್ವಂಶವಾಗಿಬಿಡುತ್ತದೆ, ಒಂದು ಕೋಪದ ಮಾತಿನಿಂದ ಪತಿಪತ್ನಿಯರಿಗೆ ಸಂಬಂಧವೇ ಕಡಿದುಹೋಗುತ್ತದೆ; ವಿಚ್ಛೇದನವೂ ಆಗಿಬಿಡುತ್ತದೆ!

**ಮನುಷ್ಯರು ಕೋಪದಿಂದ ಒರಟು ಮಾತುಗಳನ್ನಾಡಬಾರದು**

# 4. ಇವರೊಂದಿಗೆ ಸರಸವಾಡಬಾರದು

ಸರ್ಪಶ್ಚಾಗ್ನಿಶ್ಚ ಸಿಂಹಶ್ಚ ಕುಲಪುತ್ರಶ್ಚ ಭಾರತ।
ನಾವಜ್ಞೇಯಾ ಮನುಷ್ಯೇಣ ಸರ್ವೇ ಹ್ಯೇತೇಽತಿತೇಜಸಃ॥

*ಮನುಷ್ಯನು ನಾಗರಹಾವು, ಬೆಂಕಿ, ಸಿಂಹ, ಕುಲಪುತ್ರ ಇವರನ್ನು ಎಂದಿಗೂ ಅನಾದರಮಾಡಬಾರದು. ಅಂದರೆ ಇವರೊಂದಿಗೆ ಸರಸವಾಡಬಾರದು. ಏಕೆಂದರೆ ಇವರಿಗೆ ಅದ್ಭುತವಾದ ಹೆಚ್ಚಿನ ಶಕ್ತಿ, ತೇಜಸ್ಸಿರುತ್ತದೆ.*

ಮನುಷ್ಯರು ಈ ನಾಲ್ವರೊಂದಿಗೆ ತಮಾಷೆಗೂ ಆಟವಾಡಬಾರದು.

೧. **ನಾಗರಹಾವಿನೊಂದಿಗೆ:** ಸರ್ಪವೆಂದರೆ ವಿಷಜಂತು; ಅದು ಯಾವಾಗ, ಎಲ್ಲಿ ಹೇಗೆ ಕಚ್ಚುತ್ತದೆಯೋ ಹೇಳಲಾಗದು. ಸರ್ಪವು ಕಚ್ಚಿತೆಂದರೆ ಅವನ ಕತೆ ಮುಗಿದಂತೆಯೇ. ಆದ್ದರಿಂದ ಸರ್ಪದೊಂದಿಗೆ ಸರಸವಾಡಬಾರದು. ಸರ್ಪವನ್ನು ಕಂಡರೆ ನಾವೇ ಅದರಿಂದ ದೂರವಿರುವುದು ಒಳ್ಳೆಯದು.

೨. **ಅಗ್ನಿಯೊಂದಿಗೆ:** ಬೆಂಕಿ ಎಂದರೆ ಮೃತ್ಯುವಿದ್ದಂತೆ. ಬೆಂಕಿಯಿಂದ ತುಂಬಾ ಅಪಾಯ. ಹಿಂದೂ ಮುಂದೂ ನೋಡದೇ ಬೆಂಕಿಯೊಡನೆ ಸರಸವಾಡುತ್ತಿದ್ದರೇ ಅದು ನಮ್ಮನ್ನೇ ಸುಟ್ಟುಬೂದಿಮಾಡಿಬಿಡುತ್ತದೆ. ಪೂಜಾಗೃಹದಲ್ಲಿರುವ ಬೆಂಕಿಯಿಂದ ಅಂದರೆ ದೀಪದ ಕಂಬದಿಂದಲೂ ಅಪಾಯವು ತಪ್ಪಿದ್ದಲ್ಲ. ಆದ್ದರಿಂದ ಬೆಂಕಿಯೆಂದರೆ ಆದಷ್ಟೂ ದೂರವಿರುವುದು ಒಳಿತು.

೩. **ಸಿಂಹದೊಂದಿಗೆ:** ಸಿಂಹವು ಹಿಂಸ್ರಕ್ರೂರಮೃಗ. ಇವನು ಸಂನ್ಯಾಸಿ, ಇವನು ಸಂಸಾರಿ; ಇವನು ಜ್ಞಾನಿ, ಇವನು ಅಜ್ಞಾನಿ—ಎಂಬ ಬುದ್ಧಿಯು ಸಿಂಹಕ್ಕೆ ಇರುವುದಿಲ್ಲ. ಅದಕ್ಕೆ ಹಸಿವಾದರೆ ಎಲ್ಲವೂ ಆಹಾರವೇ. ಸಿಂಹ ಹುಲಿಗಳೆಂದರೆ ದೂರವಿರಬೇಕೇ ಹೊರತು, ಅವುಗಳೊಂದಿಗೆ ಆಟವಾಡುವುದು ಒಳಿತಲ್ಲ! ಊರಿನೊಳಗೆ ನಾಗರಹಾವು ಬಂದಿದೆಯಂತೆ, ಒಂದು ಸಿಂಹವು ಬಂದಿದೆಯಂತೆ, ಅಲ್ಲಿ ಬೆಂಕಿಯು ಹತ್ತಿಕೊಂಡಿದೆಯಂತೆ—ಎಂದು ತಿಳಿದ ಕೂಡಲೇ ಅದನ್ನು ಪೂರ್ಣವಾಗಿ ನಾಶಮಾಡಬೇಕೇ ಹೊರತು; ಪರವಾಗಿಲ್ಲ ಎಂದು ಅದನ್ನು ಉಪೇಕ್ಷೆಮಾಡಬಾರದು.

೪. **ಕುಲಪುತ್ರನೊಂದಿಗೂ ಸರಸವಾಡಬಾರದು:** ಕುಲಪುತ್ರನೆಂದರೆ ರಾಜಕುಮಾರ, ಶ್ರೀಮಂತರ ಪುತ್ರ, ಪ್ರಧಾನಮಂತ್ರಿ ರಾಷ್ಟ್ರಪತಿಗಳ ಮಗ; ಇವರ ತಂಟೆಗೆ ಹೋಗಲೇಬಾರದು. ಇವರನ್ನೆಂದಿಗೂ ದ್ವೇಷಿಸಬಾರದು.

**ಬುದ್ಧಿವಂತರು ಸರ್ಪ ಹುಲಿ ಬೆಂಕಿಗಳನ್ನು ಕೆಣಕಬಾರದು**

# 5. ವಿರೋಧವು ಬೇಡವೇ ಬೇಡ

ಸಂಭೋಜನಂ ಸಂಕಥನಂ ಸಂಪ್ರೀತಿಶ್ಚ ಪರಸ್ಪರಮ್ ।
ಜ್ಞಾತಿಭಿಃ ಸಹ ಕಾರ್ಯಾಣಿ ನ ವಿರೋಧಃ ಕದಾಚನ ॥

*ಜ್ಞಾತಿಗಳೊಂದಿಗೆ ಭೋಜನ, ಮಾತುಕತೆ, ಪ್ರೀತಿಯಿಂದ ವ್ಯವಹಾರ—ಇವುಗಳನ್ನು ಪರಸ್ಪರ ಹೊಂದಿಕೊಂಡು ಮಾಡುತ್ತಿರಬೇಕೇ ಹೊರತು, ಜ್ಞಾತಿಗಳೊಂದಿಗೆ ಎಂದೆಂದಿಗೂ ವಿರೋಧವನ್ನು ಮಾಡಿಕೊಳ್ಳಬಾರದು.*

ಮಾನವರೆಂದರೆ ಸಮಾಜಜೀವಿಗಳು. ಸಮಾಜದಲ್ಲಿದ್ದುಕೊಂಡೇ ಮಾನವನು ಬದುಕಬೇಕಲ್ಲವೇ? ಮಾನವನು ರಾಜನಾಗಿರಲಿ, ಮಂತ್ರಿಯಾಗಿರಲಿ, ಶ್ರೀಮಂತನಾಗಿರಲಿ, ಬಡವನೇ ಆಗಿರಲಿ, ಸಂನ್ಯಾಸಿಯೇ ಆಗಿರಲಿ; ಇವನು ಜನಗಳೊಂದಿಗೆ ಹೊಂದಿಕೊಂಡೇ ಬಾಳಬೇಕಲ್ಲವೇ? ನನಗೆ ಯಾರ ಹಂಗೂ ಬೇಕಾಗಿಲ್ಲ, ಯಾರೊಡನೆಯೂ ನನಗೆ ವ್ಯವಹಾರ ಬೇಕಾಗಿಲ್ಲ; ನಾನೊಬ್ಬನೇ ಒಬ್ಬಂಟಿಯಾಗಿ ಬದುಕಿರುತ್ತೇನೆ–ಎಂದು ಯಾವನೂ ಹೇಳುವಂತಿಲ್ಲ; ಏಕೆಂದರೆ ಇದು ಸಾಧ್ಯವಾಗದ ಮಾತು. **ಮಾನವ ಎಂದರೇ ಸಮಾಜಜೀವಿಯು.**

ಹೀಗಿರುವುದರಿಂದ ವಿವೇಕಿಯು ಎಲ್ಲರೊಂದಿಗೂ ಹೊಂದಿಕೊಂಡೇ ಹೋಗಬೇಕು. ಪ್ರಕೃತದಲ್ಲಿ, ಜ್ಞಾತಿಗಳೇ ಆಗಿದ್ದರೂ ಅವರ ಜೊತೆಯಲ್ಲಿಯೂ ಹೇಗೋ ಹೊಂದಿಕೊಂಡು ಹೋಗಬೇಕು. ಜ್ಞಾತಿಗಳು ಎಂದರೇ ಸಾಮಾನ್ಯವಾಗಿ ನಮಗೆ ದ್ವೇಷಭಾವನೆಯು ಬಂದುಬಿಡುತ್ತದೆ. **ಹುಟ್ಟುಟ್ಟುತ್ತಾ ಅಣ್ಣ ತಮ್ಮಂದಿರು, ಬೆಳೆಬೆಳೆಯುತ್ತಾ ದಾಯಾದಿಗಳು** ಎಂಬ ಗಾದೆಯು ಖಂಡಿತಾ ಸುಳ್ಳಲ್ಲ. ಹೌದು, ದಾಯಾದಿಗಳು ಎಂದರೆ ಆಸ್ತಿಪಾಸ್ತಿ, ಮನೆಮಠ, ಹೊಲಗದ್ದೆ, ಹಣಕಾಸು ವಿಷಯಗಳಲ್ಲಿ ಹೇಗೋ ಪರಸ್ಪರ ದ್ವೇಷ, ಅಸೂಯಾ, ಮಾತ್ಸರ್ಯಾದಿ ದೋಷಗಳು ಬೇಡಬೇಡವೆಂದರೂ ಬಂದೇ ಬರುತ್ತವೆ. ಇದು ಸತ್ಯ, ದಿಟ.

ಆದರೂ ದಾಯಾದಿಗಳನ್ನು ದೂರಮಾಡಿಕೊಳ್ಳಬಾರದು. ಮದುವೆ, ಮುಂಜಿ, ಗೃಹಪ್ರವೇಶ, ಶಾಂತಿಕರ್ಮಗಳು, ಮಂಗಳಕಾರ್ಯಕ್ರಮಗಳಲ್ಲಿ ದಾಯಾದಿಗಳನ್ನು ಕರೆದು ಅವರೊಂದಿಗೆ ಊಟಮಾಡಬೇಕು. ಅವರೊಂದಿಗೆ ಕ್ಷೇಮಸಮಾಚಾರದ ಮಾತುಗಳನ್ನಾಡಬೇಕು. ಅವರೊಂದಿಗೆ ಪ್ರೀತಿಯಿಂದ ನಡೆದುಕೊಳ್ಳುತ್ತಿರಬೇಕು. ಏಕೆಂದರೆ ಎಷ್ಟೇ ಆದರೂ ಅವರು ನಮ್ಮ ಅಣ್ಣ ತಮ್ಮಂದಿರೇ ಅಲ್ಲವೇ? ರಕ್ತಸಂಬಂಧಿಗಳನ್ನು ಎಂದಿಗೂ ದ್ವೇಷಿಸಬಾರದು. ಇದು ಬುದ್ಧಿವಂತರ ಮತ್ತು ವಿವೇಕಿಗಳ ಜಾಣತನದ ನಡತೆಯೆಂದು ತಿಳಿಯಬೇಕು.

**ದಾಯಾದಿಗಳೊಂದಿಗೆ ದ್ವೇಷ ವಿರೋಧವನ್ನು ಬೆಳಸಿಕೊಳ್ಳಬಾರದು**

# 6. ಸ್ತ್ರೀಯರೆಂದರೆ ಅತಿಪೂಜ್ಯರು

ಪೂಜನೀಯಾ ಮಹಾಭಾಗಾಃ ಪುಣ್ಯಾಶ್ಚ ಗೃಹದೀಪ್ತಯಃ ।
ಸ್ತ್ರಿಯಃ ಶ್ರಿಯೋ ಗೃಹಸ್ಯೋಕ್ತಾಃ ತಸ್ಮಾದ್ರಕ್ಷ್ಯಾ ವಿಶೇಷತಃ ॥

*ಮನೆಯ ಬೆಳಕಾಗಿರುವಂಥ, ಪುಣ್ಯವಂತರೂ, ಮಹಾಭಾಗರೂ ಆಗಿರುವಂಥ ಸ್ತ್ರೀಯರನ್ನು ಸಮಾಜವು ಗೌರವಿಸಬೇಕು. ಸ್ತ್ರೀಯರೆಂದರೆ ಮನೆಗೆ ಸಂಪತ್ತು. ಗೃಹಕ್ಕೆ ಸ್ತ್ರೀಯರೇ ಲಕ್ಷ್ಮೀಯರು. ಆದ್ದರಿಂದ ಸ್ತ್ರೀಯರನ್ನು ವಿಶೇಷವಾಗಿ ರಕ್ಷಿಸಬೇಕು.*

ಇಂದಿನ ಕಾಲಕ್ಕೆ ಈ ಮುತ್ತಿನಂಥ ಮಾತು ಅತ್ಯಮೂಲ್ಯವಾಗಿರುತ್ತದೆ. ಸ್ತ್ರೀಯರನ್ನು ಗೌರವಿಸಬೇಕು, ಸ್ತ್ರೀಯರನ್ನು ಸಂರಕ್ಷಿಸಬೇಕು. ಏಕೆಂದರೆ:

೧. **ಸ್ತ್ರಿಯಃ ಪೂಜನೀಯಾಃ:** ಸ್ತ್ರೀಯರೆಂದರೆ ಅತ್ಯಂತ ಪೂಜ್ಯರಾಗಿರುತ್ತಾರೆ. ಎಲ್ಲಾ ಸ್ತ್ರೀಯರನ್ನೂ ಮಹಾಲಕ್ಷ್ಮೀಸ್ವರೂಪರೆಂದೇ ನಾವು ಭಾವಿಸಬೇಕು. ಆದ್ದರಿಂದಲೇ ವೇದವು **'ಮಾತೃದೇವೋ ಭವ'** ಎಂದು ಮಾನವರಿಗೆ ಉಪದೇಶಿಸುತ್ತಿದೆ. ಸ್ತ್ರೀಯರನ್ನು ಹೊಡೆಯಬಾರದು, ನಿಂದಿಸಬಾರದು, ಹೀಯಾಳಿಸಬಾರದು. ಸ್ತ್ರೀಯರ ಮನಸ್ಸನ್ನು ನೋಯಿಸಬಾರದು.

೨. **ಪುಣ್ಯಾಶ್ಚ ಸ್ತ್ರಿಯಃ:** ಸ್ತ್ರೀಯರೆಂದರೆ ಪುಣ್ಯಸ್ವರೂಪರೇ ಆಗಿರುತ್ತಾರೆ. ಸ್ತ್ರೀಯರು ಸೌಭಾಗ್ಯಶಾಲಿನಿಯರು. ಸ್ತ್ರೀಯರ ದರ್ಶನವೇ ಸೌಭಾಗ್ಯ! ಸ್ತ್ರೀಯರನ್ನು ಯಾವಾಗಲೂ ಸಂತೋಷಪಡಿಸಬೇಕು. ಸ್ತ್ರೀಯರ ದರ್ಶನ ದಿಂದ ಪಾಪಗಳೆಲ್ಲವೂ ಭಸ್ಮವಾಗಿಬಿಡುತ್ತವೆ.

೩. **ಸ್ತ್ರಿಯಃ ಮಹಾಭಾಗಾಃ:** ಸ್ತ್ರೀಯರು ಮಹಾಭಾಗರು. ಮಹಾಭಾಗ್ಯವಂತರು ಸ್ತ್ರೀಯರು. ಶಕ್ತಿಸ್ವರೂಪಿಣಿಯರಾದ ಸ್ತ್ರೀಯರೆಲ್ಲರೂ ಮಹಾಭಾಗ್ಯವಂತ ರಲ್ಲವೇ? ಸ್ತ್ರೀಯರನ್ನು ಗೌರಿಯೆಂದೇ ಭಾವಿಸಬೇಕು.

೪. **ಸ್ತ್ರಿಯಃ ಗೃಹದೀಪ್ತಯಃ:** ಸ್ತ್ರೀಯರೆಂದರೆ ಮನೆಗೆ ದೀಪವಿದ್ದಂತೆ. ದೀಪವಿಲ್ಲದ ಮನೆ, ಸ್ತ್ರೀಯರಿಲ್ಲದ ಗೃಹ, ಕತ್ತಲೆಯ ಗುಹೆಯಂತೆ. ಸ್ತ್ರೀಯರಿಂದಲೇ ಮನೆಗೆ ಶೋಭೆ, ಬೆಳಕು ಎಂಬುದು ಸತ್ಯ.

೫. **ಸ್ತ್ರಿಯಃ ಗೃಹಸ್ಯ ಶ್ರಿಯಃ:** ಸ್ತ್ರೀಯರೇ ಗೃಹಕ್ಕೆ ಸಂಪತ್ತು. ಸ್ತ್ರೀಯರಿಂದಲೇ ಅದು **ಗೃಹ** ಎಂದಾಗುತ್ತದೆ. ಆದ್ದರಿಂದಲೇ **'ಗೃಹಿಣೀ ಗೃಹಮುಚ್ಯತೇ'** ಎಂಬ ಸುಭಾಷಿತವೂ ಇದೆ. ಮನೆಗೆ ಸಂಪತ್ತೆಂದರೆ ಸ್ತ್ರೀಯರೇ ಎಂದು ತಿಳಿಯಬೇಕು. ಗೃಹಿಣಿಯಿಲ್ಲದ ಮನೆಯು ಕಾಡಿಗೆ ಸಮಾನ.

**ಮನೆಗಳಲ್ಲಿ ಸ್ತ್ರೀಯರನ್ನು ಎಲ್ಲರೂ ಗೌರವಿಸಬೇಕು**

# 7. ಇವರುಗಳನ್ನು ಕೊಲ್ಲಬಾರದು

ಅವಧ್ಯಾ ಬ್ರಾಹ್ಮಣಾ ಗಾವೋ ಜ್ಞಾತಯಃ ಶಿಶವಃ ಸ್ತ್ರಿಯಃ ।
ಅಸ್ಮಭ್ಯಂ ಚಾನ್ನದಾತಾರಃ ಯೇ ಚ ಸ್ಯುಃ ಶರಣಾಗತಾಃ ॥

*ಬ್ರಾಹ್ಮಣರು, ಹಸುಗಳು, ಜ್ಞಾತಿಗಳು, ಶಿಶುಗಳು, ಸ್ತ್ರೀಯರು, ಅನ್ನದಾತೃಗಳು ಮತ್ತು ಶರಣಾಗತರಾದವರು—ಇವರನ್ನು ಕೊಲ್ಲಬಾರದು.*

ಈ ಕೆಳಗಿನ ಏಳು ಜನಗಳನ್ನು ಕೊಲ್ಲಬಾರದು:

೧. **ಬ್ರಾಹ್ಮಣಾಃ ಅವಧ್ಯಾಃ:** ಬ್ರಾಹ್ಮಣರನ್ನು ಕೊಲ್ಲಬಾರದು. ಬ್ರಾಹಣರೆಂದರೆ ಭೂಸುರರು, ವೇದಪುರುಷರು. ಇಂಥವರನ್ನು ಕೊಲ್ಲಬಾರದು.

೨. **ಗಾವಃ ಅವಧ್ಯಾಃ:** ಹಸುಗಳನ್ನು ಕೊಲ್ಲಬಾರದು. ಹಸುಗಳೆಂದರೆ ಕಾಮಧೇನುವಿನ ಸ್ವರೂಪ. ಸರ್ವದೇವತಾಸ್ವರೂಪಗಳೇ ಹಸುಗಳು.

೩. **ಜ್ಞಾತಯಃ ಅವಧ್ಯಾಃ:** ಜ್ಞಾತಿಗಳನ್ನು ಕೊಲ್ಲಬಾರದು. ಅಣ್ಣತಮ್ಮಂದಿರೇ ಆದ, ರಕ್ತಸಂಬಂಧಿಗಳೇ ಆದ ಜ್ಞಾತಿಗಳನ್ನು ಕೊಲ್ಲಬಾರದು.

೪. **ಶಿಶವಃ ಅವಧ್ಯಾಃ:** ಹಸುಗೂಸುಗಳನ್ನು ಕೊಲ್ಲಬಾರದು. ಏಕೆಂದರೆ ಶಿಶುಗಳೆಂದರೆ ಅಮಾಯಿಕರಾದ, ದೇವತಾಸ್ವರೂಪರಾದ ಮಕ್ಕಳುಗಳು.

೫. **ಸ್ತ್ರಿಯಃ ಅವಧ್ಯಾಃ:** ಸ್ತ್ರೀಯರನ್ನು ಕೊಲ್ಲಬಾರದು. ಏಕೆಂದರೆ ಸ್ತ್ರೀಯರು ಮಾತೃಸ್ವರೂಪಿಣಿಯರು; ಲಲಿತಾಸ್ವರೂಪಿಣಿಯರೆಂದರೆ ಸ್ತ್ರೀಯರು.

೬. **ಅಸ್ಮಭ್ಯಂ ಅನ್ನದಾತಾರಃ ಅವಧ್ಯಾಃ:** ಅನ್ನದಾತೃಗಳನ್ನು ಕೊಲ್ಲಬಾರದು. ನಮಗೆ ಅನ್ನವನ್ನು ಕೊಟ್ಟವರೆಂದರೆ ತಂದೆಸಮಾನರೇ ಅಲ್ಲವೇ?

೭. **ಶರಣಾಗತಾಃ ಅವಧ್ಯಾಃ:** ಶರಣಾಗತರಾದವರನ್ನು ಕೊಲ್ಲಬಾರದು. ಏಕೆಂದರೆ ಅವರು ಆಶ್ರಯವನ್ನು ಬಯಸಿ ನಮ್ಮಲ್ಲಿಗೆ ಬಂದಿರುತ್ತಾರೆ.

ನಿಜವಾಗಿ ಹೇಳಬೇಕೆಂದರೆ ಯಾರನ್ನೂ ಕೊಲ್ಲಬಾರದು. ಏಕೆಂದರೆ ಎಲ್ಲರಲ್ಲಿಯೂ ಒಬ್ಬನೇ ಭಗವಂತನು ಇದ್ದಾನೆ. ಸಮಾತ್ಮಭಾವಸಂಪನ್ನರಾಗ ಬೇಕೇ ಹೊರತು ಕ್ರೂರದೃಷ್ಟಿಯಿಂದ ಯಾರನ್ನೂ ನೋಡಬಾರದು ಮತ್ತು ಕೊಲ್ಲಬಾರದು. ಇದೇ ನಮ್ಮ ಭಾರತೀಯ ಸಂಸ್ಕೃತಿ. **ಅಹಿಂಸಾ ಪರಮೋ ಧರ್ಮಃ** ಎಂಬುದೇ ಸನಾತನಸಂಸ್ಕೃತಿ. ಆದರೆ ಅದರಲ್ಲಿ ವಿಶೇಷವಾಗಿ ಈ ಮೇಲಿನವರನ್ನು ಕೊಲ್ಲಲೇಬಾರದು ಎಂಬುದೇ ಇಲ್ಲಿ ಅಭಿಪ್ರಾಯ.

**ಬ್ರಾಹ್ಮಣರನ್ನೂ ಹಸುಗಳನ್ನೂ ಶಿಶುಗಳನ್ನೂ ಕೊಲ್ಲಬಾರದು**

# 8. ಸ್ವರ್ಗಪ್ರಾಪ್ತಿಗೆ ಹತ್ತು ಸಾಧನಗಳಿವು

ಸತ್ಯಂ ಶ್ರದ್ಧಾ ಶ್ರುತಂ ವಿದ್ಯಾ ಕೌಲ್ಯಂ ಶೀಲಂ ಬಲಂ ಧನಮ್ ।
ಶೌರ್ಯಂ ಚ ಚಿತ್ರಭಾಷಾ ಚ ದಶೇಮೇ ಸ್ವರ್ಗಯೋನಯಃ ॥

*ಸತ್ಯ, ಶ್ರದ್ಧಾ, ಶಾಸ್ತ್ರಪಾಂಡಿತ್ಯ, ವಿದ್ಯಾ, ಕುಲೀನತೆ, ಶೀಲ, ಬಲ, ಧನ, ಶೌರ್ಯ ಮತ್ತು ರಸವತ್ತಾದ ಮಾತು. ಈ ಹತ್ತು ಗುಣಗಳು ಸ್ವರ್ಗಕ್ಕೆ ಸಾಧನಗಳು.*

ಸ್ವರ್ಗಲೋಕಪ್ರಾಪ್ತಿಗೆ ಈ ಹತ್ತು ಸದ್ಗುಣಗಳು ಸಾಧನಗಳು:

೧. **ಸತ್ಯ:** ಯಾವ ಕಾರಣಕ್ಕೂ ಸುಳ್ಳನ್ನು ಹೇಳದೇ ಸತ್ಯವನ್ನೇ ಸಂತೋಷ ದಿಂದ, ಹೆಮ್ಮೆಯಿಂದ ಹೇಳುವುದು.

೨. **ಶ್ರದ್ಧಾ:** ಗುರುವಾಕ್ಯದಲ್ಲಿ ಹಾಗೂ ಶಾಸ್ತ್ರೋಪದೇಶದಲ್ಲಿ ಶ್ರದ್ಧೆ; ಜನ್ಮಾಂತರ ದಲ್ಲಿ ದೇಹಾಂತರದಲ್ಲಿ ಶ್ರದ್ಧೆಯು ಇರಲೇಬೇಕು.

೩. **ಶ್ರುತಂ:** ವೇದಾಂತಶಾಸ್ತ್ರದ ಜ್ಞಾನ, ಧರ್ಮಶಾಸ್ತ್ರಗಳ ಜ್ಞಾನ, ವ್ಯಾಕರಣ ಜ್ಯೋತಿಷ್ಯಶಾಸ್ತ್ರಾದಿಗಳ ಜ್ಞಾನವು ಮನುಷ್ಯರಿಗೆ ಬೇಕೇಬೇಕು.

೪. **ವಿದ್ಯಾ:** ವಿದ್ಯೆಯೆಂಬುದು ಮಾನವರಿಗೆ ಸಂಪತ್ತು. ತಿಳಿವಳಿಕೆಯೂ ಬೇಕು. ಮನುಷ್ಯನು ವಿದ್ಯಾವಿನಯಶೀಲನಾಗಿರಬೇಕು.

೫. **ಕೌಲ್ಯಂ:** ಸತ್‌ಕುಲದಲ್ಲಿ ಹುಟ್ಟುವದು. ಬ್ರಾಹ್ಮಣರ, ಯೋಗಿಗಳ, ಮಹಾತ್ಮರ, ಜ್ಞಾನಿಗಳ ಕುಲದಲ್ಲಿ ಹುಟ್ಟುವುದು.

೬. **ಶೀಲಂ:** ಶೀಲವೆಂಬುದು ಮಾನವರಿಗೆ ಮುಖ್ಯವಾದ ಸಂಪತ್ತು. **"ಶೀಲಂ ಸರ್ವತ್ರ ವೈ ಧನಂ"**—ಎಂದು ಶಾಸ್ತ್ರಗಳು ಸಾರಿಸಾರಿ ಹೇಳುತ್ತಿವೆ.

೭. **ಬಲಂ:** ದೈಹಿಕಬಲವೂ ಮನೋಬಲವೂ ಇರಬೇಕು. ಬಲವಿಲ್ಲದವನಿಗೆ ಎಲ್ಲೆಲ್ಲಿಯೂ ಪರಾಭವ, ಆದರಿಂದ ದುಃಖವೇ ಉಂಟಾಗುತ್ತದೆ.

೮. **ಧನಂ:** ಧನವಂತೂ ಈಗಿನ ಕಾಲದಲ್ಲಿ ಬೇಕೇಬೇಕು. ಯಾರನ್ನೂ ಯಾಚಿ ಸದೇ ಸಂತೃಪ್ತಿಯಿಂದ ಜೀವನವನ್ನು ಸಾಗಿಸುವವನೇ ಬುದ್ಧಿವಂತನು.

೯. **ಶೌರ್ಯಂ:** ಶೌರ್ಯವೂ ಬೇಕು. ಗಟ್ಟುಮುಟ್ಟಾಗಿದ್ದರೇ, ಜೋರಾಗಿದ್ದರೇ ಅವನು ಮನುಷ್ಯ. ಮೆತ್ತಗಿರುವವನನ್ನು ಸಮಾಜವು ತುಳಿದುಬಿಡುತ್ತದೆ.

೧೦. **ಚಿತ್ರಭಾಷಾ:** ರಸವತ್ತಾಗಿ, ಚಮತ್ಕಾರದಿಂದ ಮಾತನಾಡುವ ಕಲೆ. ಬುದ್ಧಿ ವಂತರು ತಮ್ಮ ಮನೋಜ್ಞವಾದ ಮಾತಿನಿಂದ ಜಗತ್ತನ್ನೇ ಗೆಲ್ಲುತ್ತಾರೆ.

**ಮಾನವರು ಶೀಲ, ಸತ್ಯ, ಶಾಸ್ತ್ರಜ್ಞಾನವನ್ನು ಸಂಪಾದಿಸಿಕೊಳ್ಳಬೇಕು**

# 9. ಪುಣ್ಯವನ್ನು ಇಂದೇ ಮಾಡಬೇಕು

ಪೂರ್ವೇ ವಯಸಿ ತತ್ ಕುರ್ಯಾತ್ ಯೇನ ವೃದ್ಧಃ ಸುಖಂ ವಸೇತ್ ।
ಯಾವಜ್ಜೀವೇನ ತತ್ ಕುರ್ಯಾತ್ ಯೇನ ಪ್ರೇತ್ಯ ಸುಖಂ ವಸೇತ್ ॥

*ವಯಸ್ಸಾದ ಮೇಲೆ ಯಾವುದರಿಂದ ಸುಖವಾಗಿರಬಹುದೋ ಅಂಥ ಕೆಲಸವನ್ನು ವಿವೇಕಿಯು ಚಿಕ್ಕ ವಯಸ್ಸಿನಲ್ಲಿಯೇ ಮಾಡಿಬಿಡಬೇಕು; ಯಾವುದರಿಂದ ಮಾನವನು ಜನ್ಮಾಂತರದಲ್ಲಿ ದೇಹಾಂತರದಲ್ಲಿ ಸುಖವಾಗಿರಬಹುದೋ, ಅಂಥ ಒಳ್ಳೆಯ ಪುಣ್ಯಕಾರ್ಯವನ್ನು ಈ ಜನ್ಮದಲ್ಲಿ ಬದುಕಿರುವವರೆಗೂ ಮಾಡುತ್ತಿರಬೇಕು.*

ವಯಸ್ಸಾಯಿತು ಎಂದರೆ, ನಿಶ್ಶಕ್ತಿ, ರೋಗಾದಿಗಳು, ಸುಸ್ತು, ಆಲಸ್ಯ—ಎಲ್ಲವೂ ಬಂದೆರಗುತ್ತವೆ. ಆಗ ಹಣವನ್ನು ಸಂಪಾದಿಸಲು ಉತ್ಸಾಹವಾಗಲೀ ಶಕ್ತಿಸಾಮರ್ಥ್ಯಗಳಾಗಲೀ ಇರುವುದಿಲ್ಲ. ಆದರೆ ಬದುಕಲೇಬೇಕಲ್ಲ! ಬದುಕಿರಬೇಕಾದರೆ ಊಟತಿಂಡಿಯನ್ನು ಮಾಡಲೇಬೇಕಲ್ಲ ; ಆ ಊಟ ತಿಂಡಿಗೆ ಹಣವು ಬೇಕಲ್ಲ ; ಆದರೆ ವೃದ್ಧನಾದ ಮೇಲೆ ಹಣವನ್ನು ಸಂಪಾದನೆಮಾಡುವುದಕ್ಕಾಗುವುದಿಲ್ಲವಲ್ಲ ; ಆದ್ದರಿಂದಲೇ ಚಿಕ್ಕವಯಸ್ಸಿನಲ್ಲಿಯೇ ಚೆನ್ನಾಗಿ ಕೈತುಂಬಾ ಸಂಪಾದನೆಯನ್ನು ಮಾಡಬೇಕು. ಸ್ವಂತ ಮನೆಗಳನ್ನು ಯೌವನದಲ್ಲಿಯೇ ಕಟ್ಟಿಕೊಳ್ಳಬೇಕು. ವಯಸ್ಸಾಗುವುದರೊಳಗಾಗಿ ತನ್ನ ಮಕ್ಕಳಿಗೆಲ್ಲ ವಿವಾಹವನ್ನು ಮಾಡಿಬಿಡಬೇಕು. ಇಷ್ಟನ್ನೆಲ್ಲ ಮಾಡಿದ್ದಾನೆ ಎಂದರೆ ಅಂಥವನು ವಾರ್ಧಕ್ಯದಲ್ಲಿ ಸುಖವಾಗಿ, ಆನಂದವಾಗಿ, ನೆಮ್ಮದಿಯಿಂದ ಬಾಳುತ್ತಾನೆ.

ಇನ್ನು, ಜನ್ಮಾಂತರದಲ್ಲಿಯೂ ನೆಮ್ಮದಿಯಾಗಿ ಬಾಳಬೇಕಾದರೆ ಈ ಜನ್ಮದಲ್ಲಿ ಅಂಥವನು ಪುಣ್ಯಕರ್ಮಗಳನ್ನು ಮಾಡಬೇಕು. ಈ ಜನ್ಮದಲ್ಲಿ ದಾನ, ಧರ್ಮ, ಜಪ, ಪಾರಾಯಣ, ಹೋಮ ಹವನ ಯಜ್ಞಯಾಗಾದಿಗಳನ್ನೂ ಗುರುಹಿರಿಯರ ಸೇವೆಯನ್ನೂ ಶ್ರದ್ಧೆಯಿಂದ ಮಾಡಬೇಕು. ವೇದಶಾಸ್ತ್ರಗಳನ್ನು ನಂಬಬೇಕು. "ಪುಣ್ಯದಿಂದ ಪುಣ್ಯವನ್ನೂ ಪಾಪದಿಂದ ಪಾಪವನ್ನೂ ಹೊಂದುತ್ತಾನೆ"—ಎಂದು ಶಾಸ್ತ್ರಗಳು ಸಾರಿಸಾರಿ ಹೇಳುತ್ತಿವೆ.

ಆದ್ದರಿಂದ ಈ ಜನ್ಮದಲ್ಲಿ ಚೆನ್ನಾಗಿ ದಾನ, ಧರ್ಮ, ಜಪತಪಾದಿಗಳನ್ನು ಮಾಡುತ್ತಿದ್ದರೆ, ಅಂಥವರು ಮುಂದಿನ ಜನ್ಮದಲ್ಲಿ ಸಂತೋಷವಾಗಿರುತ್ತಾರೆ. ಹಿಂದಿನ ಜನ್ಮದ ಪಾಪದಿಂದ ಈ ಜನ್ಮದಲ್ಲಿಯೂ ದುಃಖವೇ ಬಂದಿರುತ್ತದೆ. ಆದ್ದರಿಂದ ಈಗಿನ ಸುಖಗಳಿಗೆಲ್ಲ ಆ ಹಿಂದಿನ ಪುಣ್ಯವೇ ಕಾರಣ. ಹೀಗಾಗಿ ಈಗಿನ ಪುಣ್ಯಗಳೇ ಮುಂದಿನ ಜನ್ಮದಲ್ಲಿ ನೆಮ್ಮದಿಗೆ ಕಾರಣವಾಗುತ್ತವೆ.

**ಚಿಕ್ಕವಯಸ್ಸಿನಲ್ಲಿಯೇ ಸತ್ಕಾರ್ಯಗಳನ್ನು ಮಾಡಬೇಕು**

# 10. ಯಾರಿಗೆ ಯಾರು ಶಾಸಕರು?

**ಗುರುರಾತ್ಮವತಾಂ ಶಾಸ್ತಾ, ಶಾಸ್ತಾ ರಾಜಾ ದುರಾತ್ಮನಾಮ್ ।**
**ಅಥ ಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಯಮಃ ॥**

*ಇಂದ್ರಿಯನಿಗ್ರಹವುಳ್ಳವರಿಗೆ ಗುರುವು ಶಾಸಕನಾಗುತ್ತಾನೆ, ದುಷ್ಟರಿಗೆ ರಾಜನು ಶಾಸಕನು. ಗುಪ್ತವಾಗಿ ಪಾಪಾಚರಣೆಮಾಡುವವರಿಗೆ ಮತ್ತು ತಾವು ಮಾಡಿದ ಪಾಪಗಳನ್ನು ಮುಚ್ಚಿಡುವವರಿಗೆ ವೈವಸ್ವತಯಮನು ಶಾಸಕನಾಗುತ್ತಾನೆ.*

೧. **ಆತ್ಮವತಾಂ ಗುರುಃ ಶಾಸ್ತಾ:** ಇಂದ್ರಿಯನಿಗ್ರಹವುಳ್ಳಂಥ ಅಧ್ಯಾತ್ಮ ಸಾಧಕರಿಗೆ ಗುರುವು ಶಾಸಕನಾಗಿರುತ್ತಾನೆ. ಗುರು ಎಂದರೆ ಶಿಷ್ಯರುಗಳ ಅಜ್ಞಾನವನ್ನು ನಾಶಮಾಡುವವನು. ಮುಮುಕ್ಷುಗಳಾದ ತತ್ತ್ವಜಿಜ್ಞಾಸುಗಳಿಗೆ ಬ್ರಹ್ಮನಿಷ್ಠನಾದ ಸದ್ಗುರುವು ಶಿಕ್ಷಕನಾಗಿ ಶಾಸಕನೂ ಆಗಿರುತ್ತಾನೆ. ಅಧ್ಯಾತ್ಮಸಾಧಕರಿಗೆ ಸನ್ಮಾರ್ಗವನ್ನು ತೋರಿಸುವ ಮಹಾತ್ಮನೆಂದರೆ ಸದ್ಗುರುವೇ. ಸದ್ಗುರುಗಳ ಉಪದೇಶದಂತೆ ನಡೆಯುತ್ತಿದ್ದರೆ ಅಂಥ ಶಿಷ್ಯನು ಆತ್ಮಜ್ಞಾನವನ್ನೇ ಹೊಂದುತ್ತಾನೆ.

೨. **ದುರಾತ್ಮನಾಂ ರಾಜಾ ಶಾಸ್ತಾ:** ದುರಾತ್ಮರಿಗೆ ರಾಜನೇ ಶಾಸಕನು. ಯಾರು ಜಿತೇಂದ್ರಿಯರಲ್ಲವೋ, ಯಾರು ಸಾತ್ತ್ವಿಕರಲ್ಲವೋ, ಯಾರಿಗೆ ಆಧ್ಯಾತ್ಮಿಕ ಸಂಸ್ಕಾರವೇ ಇಲ್ಲವೋ ಅಂಥವರಿಗೆ ರಾಜನೇ ಶಾಸಕನು. ಕಳ್ಳರಿಗೆ, ವಂಚಕರಿಗೆ, ಮೋಸಗಾರರಿಗೆ, ಅನಾಚಾರಿದುರಾಚಾರಿಗಳಿಗೆ ರಾಜನೇ ಶಿಕ್ಷೆಯನ್ನು ಕೊಡುತ್ತಾನೆ. ತಪ್ಪಿತಸ್ಥರಿಗೆ ಸರಿಯಾದ ಶಿಕ್ಷೆಯನ್ನು ಕೊಡುವವನು ಎಂದರೆ ರಾಜನೇ. ರಾಜನ ಭಯದಿಂದಲೇ ಪ್ರಜೆಗಳು ಸಭ್ಯರಾಗಿರುತ್ತಾರೆ.

೩. **ಪ್ರಚ್ಛನ್ನಪಾಪಾನಾಂ ವೈವಸ್ವತೋ ಯಮಃ ಶಾಸ್ತಾ:** ಯಾರಿಗೂ ಗೊತ್ತಾಗದಂತೆ ಪಾಪಗಳನ್ನು ಮಾಡುವವರಿಗೂ, ಮತ್ತು ತಾವು ಮಾಡಿರುವ ಪಾಪಗಳನ್ನು ಮುಚ್ಚಿಡುವವರಿಗೂ ವೈವಸ್ವತಯಮನೇ ಶಾಸಕನು. ಮನುಷ್ಯನು ತುಂಬಾ ಬುದ್ಧಿವಂತ. ಹೊರಗಿನವರಿಗೆ ತಿಳಿಯದಂತೆ, ಯಾರಿಗೂ ಗೊತ್ತಾಗದಂತೆ ಬಹು ಎಚ್ಚರಿಕೆಯಿಂದ ಪಾಪಕೃತ್ಯಗಳನ್ನು ಮಾಡುತ್ತಾನೆ. ಅನಂತರ, ಮಾಡಿದ ಆ ಪಾಪಗಳನ್ನೆಲ್ಲ ಮುಚ್ಚಿಡುತ್ತಾನೆ. ಯಾರಿಗೂ ತಿಳಿಯದಂತೆ ಪಾಪವನ್ನು ನಾನು ಮಾಡಿದ್ದೇನೆ ಎಂದು ಮಾನವನು ಜಂಭಕೊಚ್ಚಿಕೊಳ್ಳುತ್ತಾನೆ. ಆದರೆ ಯಮನು ಈ ಮಾನವನಿಗಿಂತಲೂ ಬುದ್ಧಿವಂತ. ಯಮನೇ ಇಂಥವರಿಗೆ ಶಿಕ್ಷೆಯನ್ನು ಕೊಡುತ್ತಾನೆ. ನೆನಪಿರಲಿ.

**ವಿವೇಕಿಯು ಪಾಪಕೃತ್ಯಗಳನ್ನು ಮಾಡಲೇಬಾರದು**

## 11. ದುಷ್ಟರಿಗೆ ಇಷ್ಟವಲ್ಲದ ಗುಣಗಳಿವು

ಅನಸೂಯಾऽऽರ್ಜವಂ ಶೌಚಂ ಸಂತೋಷಃ ಪ್ರಿಯವಾದಿತಾ।
ದಮಃ ಸತ್ಯಮನಾಯಾಸೋ ನ ಭವಂತಿ ದುರಾತ್ಮನಾಮ್॥

*ಅಸೂಯೆಯಿಲ್ಲದಿರುವುದು, ಆರ್ಜವಸ್ವಭಾವ, ಶುಚಿತ್ವ, ಸಂತೋಷ, ಪ್ರಿಯವಾಗಿ ಮಾತಾಡುವುದು, ಇಂದ್ರಿಯನಿಗ್ರಹ, ಸತ್ಯ, ಚಾಂಚಲ್ಯರಾಹಿತ್ಯ—ಈ ಎಂಟು ಸದ್ಗುಣಗಳು ದುಷ್ಟರಲ್ಲಿ ಇರುವುದಿಲ್ಲ.*

ಈ ಕೆಳಗಿನ ಎಂಟು ಗುಣಗಳು ದುರಾತ್ಮರಿಗೆ ಇಷ್ಟವಾಗುವುದಿಲ್ಲ:

೧. **ಅನಸೂಯಾ:** ಅಸೂಯೆಯಿಲ್ಲದಿರುವಿಕೆ. ಇತರರ ಸಂಪತ್ತನ್ನು ಕಂಡಾಗ, ಮಹಾವಿದ್ವಾಂಸರನ್ನು ಕಂಡಾಗ ದುಷ್ಟರಿಗೆ ಹೊಟ್ಟೆಕಿಚ್ಚು ಬಂದುಬಿಡುತ್ತದೆ.

೨. **ಆರ್ಜವಮ್:** ನೇರಾದ ಮಾತು, ಸರಳ ಸ್ವಭಾವ, ಮನಃಶುದ್ಧಿಗಳು ದುಷ್ಟರಿಗೆ ಕನಸಿನಲ್ಲಿಯೂ ಇರುವುದಿಲ್ಲ. ಆರ್ಜವರಹಿತರಿವರು.

೩. **ಶೌಚಮ್:** ವಾಕ್‌ಶುದ್ಧಿ, ದೇಹಶುದ್ಧಿ, ಮನಃಶುದ್ಧಿಗಳು ದುಷ್ಟರಿಗೆ ಇರುವುದಿಲ್ಲ. ಒಳಗೆ ತುಂಬಾ ಕೊಳೆ, ಹೊರಗೆ ಬರೀ ಆಡಂಬರ!

೪. **ಸಂತೋಷಃ:** ದುಷ್ಟರಿಗೆ ಸಂತೋಷವೆಂಬುದು ಇರುವುದಿಲ್ಲ. ಯಾವಾಗಲೂ ಅಸಂತುಷ್ಟಿ, ಅಸಂತೃಪ್ತಿಯಿಂದಲೇ ಇವರು ಸೊರಗುತ್ತಿರುತ್ತಾರೆ.

೫. **ಪ್ರಿಯವಾದಿತಾ:** ಪ್ರಿಯವಾಗಿ ಮಾತನಾಡುವುದೆಂಬುದಂತೂ ದುಷ್ಟರಿಗೆ ಗೊತ್ತೇ ಇಲ್ಲ. ಯಾವಾಗಲೂ ಕೆಟ್ಟ, ದುಷ್ಟ, ಕೋಪದ ಮಾತುಗಳನ್ನೇ ಇವರು ಆಡುತ್ತಾರೆ. ಒರಟು ಮಾತುಗಳೇ ದುಷ್ಟರಿಗೆ ಸಂಪತ್ತು.

೬. **ದಮಃ:** ಶಾಂತವಾಗಿರುವುದು, ಇಂದ್ರಿಯಗಳನ್ನು ನಿಗ್ರಹಮಾಡುವುದು, ನೆಮ್ಮದಿಯಿಂದ ಬಾಳುವುದು ಎಂಬುದು ದುಷ್ಟರಿಗೆ ಸಾಧ್ಯವಾಗುವುದಿಲ್ಲ.

೭. **ಸತ್ಯಮ್:** ಸತ್ಯವಚನವೆಂಬುದು ದುಷ್ಟರಿಗೆ ಗೊತ್ತೇ ಇಲ್ಲ. ಯಾವಾಗಲೂ ಸುಳ್ಳನ್ನೇ ಹೇಳುತ್ತಾ ಕಾಲಕಳೆಯುವವರಿವರು.

೮. **ಅನಾಯಾಸಃ:** ಆಯಾಸವಿಲ್ಲದೇ, ಇಂದ್ರಿಯಚಾಪಲ್ಯವಿಲ್ಲದೇ, ದುಡುಕಿ ಮಾತನಾಡದೇ ಸುಮ್ಮನೇ ಶಾಂತರಾಗಿ ದುಷ್ಟರು ಇರಲಾರರು.

ಈ ದೋಷಗಳಿಂದ ಮುಕ್ತರಾದ ಧೀರರೇ ಸಂತರು, ಸಾಧುಗಳು. ಈ ಮೇಲಿನ ಎಂಟು ಸದ್ಗುಣಗಳನ್ನು ದ್ವೇಷಿಸುವವರು ದುಷ್ಟರಾದರೆ, ಇವುಗಳನ್ನು ಸಹಜವಾಗಿ ಉಳ್ಳ ಮಹಾತ್ಮರೇ ಸಜ್ಜನರೆಂದು ತಿಳಿಯಬೇಕು.

**ಮಾನವರು ಅಸೂಯಾ, ಅನೃತಗಳಿಂದ ದೂರರಾಗಿರಬೇಕು**

## 12. ಇವರುಗಳ ಮೂಲವನ್ನು ಹುಡುಕಬಾರದು

**ಋಷೀಣಾಂ ಚ ನದೀನಾಂ ಚ ಕುಲಾನಾಂ ಚ ಮಹಾತ್ಮನಾಮ್।**
**ಪ್ರಭವೋ ನಾಧಿಗಂತವ್ಯಃ ಸ್ತ್ರೀಣಾಂ ದುಶ್ಚರಿತಸ್ಯ ಚ॥**

*ಋಷಿಮುನಿಗಳ, ನದಿಗಳ, ಮಹಾತ್ಮರುಗಳ, ಕುಲಗಳ ಹಾಗೂ ಸ್ತ್ರೀಯರ ದುಶ್ಚರಿತಗಳ ಮೂಲಗಳನ್ನು ಹುಡುಕಬಾರದು.*

ಈ ನಾಲ್ಕರ ಮೂಲಗಳನ್ನು ಹುಡುಕಲು ಹೋಗಬಾರದು:

೧. **ಋಷೀಣಾಂ ಮೂಲಂ: ಋಷಿಗಳ** ಹಾಗೂ **ಮುನಿಗಳ** ಮೂಲವನ್ನು ನೋಡಬಾರದು. ತಪೋಮೂರ್ತಿಗಳಾದ ಋಷಿಗಳ ಉಪದೇಶಗಳನ್ನು ಶ್ರವಣಮಾಡಿ ನಾವುಗಳು ಕೃತಾರ್ಥರಾಗಬೇಕೇ ಹೊರತು, ಅವರ ಮೂಲ ವನ್ನು ಶೋಧನೆಮಾಡಬಾರದು. ಋಷಿಗಳ ವಾಸಸ್ಥಾನ ಯಾವುದು? ಅವರು ಬೆಳಗ್ಗೆ ಎಷ್ಟು ಹೊತ್ತಿಗೆ ಏಳುತ್ತಾರೆ? ಏನನ್ನು ಕುಡಿಯುತ್ತಾರೆ? ಅವರ ಆಹಾರವಿಹಾರಗಳೇನು? ಅವರು ಏನನ್ನು ತಿನ್ನುತ್ತಾರೆ? ಅವರು ಎಂಥ ತಪಸ್ಸುಮಾಡುತ್ತಾರೆ? ಈ ವಿಷಯಗಳಾವುವೂ ಬೇಕಾಗಿಲ್ಲ.

೨. **ನದೀನಾಂ ಮೂಲಂ:** ನದಿಗಳ ಮೂಲವನ್ನು ನಾವುಗಳು ಹುಡುಕ ಬಾರದು. ಗಂಗಾ, ಯಮುನಾ, ಗೋದಾವರೀ, ನರ್ಮದಾ ಮುಂತಾದ ಮಹಾನದಿಗಳು ಇಡೀ ಮಾನವಕುಲವನ್ನೇ ಪವಿತ್ರಗೊಳಿಸುತ್ತಾ, ಹರಿದೂ ಹರಿದೂ ಸಮುದ್ರವನ್ನು ಸೇರುತ್ತಿವೆ. ಇಂಥ ನದಿಗಳ ಮೂಲವನ್ನು ಹುಡುಕಿಕೊಂಡು ಹೋಗಬಾರದು. ನದೀಸ್ನಾನ, ನದೀಪಾನ, ನದೀಪೂಜೆ ಗಳನ್ನು ಮಾಡುತ್ತಾ ನಾವು ಧನ್ಯರಾಗೋಣ.

೩. **ಮಹಾತ್ಮನಾಂ ಮೂಲಂ:** ಮಹಾತ್ಮರುಗಳ, ತಪಸ್ವಿಗಳ ಮೂಲವನ್ನು ಹುಡುಕುತ್ತಾ ಹೋಗಬಾರದು. ವಾಲ್ಮೀಕಿಗಳು, ವೇದವ್ಯಾಸರು, ವಿಶ್ವಾ ಮಿತ್ರರು ಮುಂತಾದ ಮಹಾತ್ಮರುಗಳ ಮೂಲವನ್ನು ಹುಡುಕಬಾರದು. ಶ್ರೀ ಗೌಡಪಾದಾಚಾರ್ಯರು, ಶ್ರೀ ಗೋವಿಂದಭಗವತ್ಪಾದಾಚಾರ್ಯರು, ಶ್ರೀ ಶಂಕರಾಚಾರ್ಯರು, ಶ್ರೀ ರಮಣಮಹರ್ಷಿಗಳು ಮುಂತಾದ ಮಹಾತ್ಮರುಗಳ ಮೂಲವನ್ನು ಹುಡುಕುವ ಕೆಟ್ಟ ಕೆಲಸಕ್ಕೆ ಕೈಹಾಕಬಾರದು.

೪. **ಸ್ತ್ರೀಣಾಂ ದುಶ್ಚರಿತಸ್ಯ ಮೂಲಂ:** ಸ್ತ್ರೀಯರ ಕೆಟ್ಟ ನಡತೆಗಳ ಬಗ್ಗೆ ಸಂಶೋಧನೆಯನ್ನು ಮಾಡಬೇಕಾಗಿಲ್ಲ. ಸ್ತ್ರೀಯರೆಂದರೆ ಗೃಹಸಂಪತ್ತು.

**ಋಷಿಮೂಲ, ನದೀಮೂಲ, ನಾರೀಮೂಲಗಳನ್ನು ಹುಡುಕಬಾರದು**

# 13. ವಿವೇಕಿಗಳ ಸ್ವಭಾವವಿದು

ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತುಮ್ ।
ಆಪತ್ಸು ಚ ನ ಮುಹ್ಯಂತಿ ನರಾಃ ಪಂಡಿತಬುದ್ಧಯಃ ॥

*ದುರ್ಲಭವಾದುದನ್ನು ಹೊಂದಲು ಆಶಿಸುವುದಿಲ್ಲ, ಕಳೆದುಕೊಂಡುದನ್ನು ಕುರಿತು ದುಃಖಿಸುವುದೂ ಇಲ್ಲ, ಆಪತ್ತುಗಳು ಬಂದೊದಗಿದಾಗ ಧೃತಿಗೆಡುವುದೂ ಇಲ್ಲ; ಇದು ವಿವೇಕಿಗಳಾದ ಪ್ರಾಜ್ಞರ ಸ್ವಭಾವವು.*

ವಿವೇಕಿಗಳಾದ ಪಂಡಿತರ ಮೂರು ಲಕ್ಷಣಗಳನ್ನು ಇಲ್ಲಿ ಹೇಳಿದೆ:

೧. **ಅಪ್ರಾಪ್ಯಂ ನ ಅಭಿವಾಂಛಂತಿ:** ಯಾವುದನ್ನು ಹೊಂದಲು ಸಾಧ್ಯವಿಲ್ಲವೋ ಅಂಥ ವಸ್ತುಗಳನ್ನು ಹೊಂದುವುದಕ್ಕೆ ವಿವೇಕಿಗಳು ಪ್ರಯತ್ನವನ್ನೇ ಮಾಡುವುದಿಲ್ಲ. ಉತ್ತಮಫಲಗಳನ್ನೇ ಎಲ್ಲರೂ ಬಯಸುತ್ತಾರೆ. ಆದರೆ ಆ ಫಲಗಳು ಅವರಿಗೆ ಸಿಕ್ಕುವುದಿಲ್ಲ. ಏಕೆಂದರೆ ಅವರಿಗೆ ಅದನ್ನು ಹೊಂದುವ ಯೋಗ್ಯತೆಯೇ ಇಲ್ಲ. ಆದರೆ ಆಶೆಯು ಮಾತ್ರ ಇದೆ; ಇದು ಅಜ್ಞರ ಲಕ್ಷಣ. ದಡ್ಡನು ಬಡವನೇ ಆಗಿದ್ದರೂ ಅವನಿಗೆ ಅರಮನೆಯ ಆಶೆ, ವಿಶ್ವವಿದ್ಯಾಲಯಕ್ಕೆ ಕುಲಪತಿಯಾಗಬೇಕೆಂಬ ಆಶೆ! ಇದು ದಡ್ಡತನ! ಇದು ಮೂರ್ಖತನದ ಪರಮಾವಧಿ! ಆದರೆ ಪಂಡಿತರು ಇಂಥ ಆಶೆಗಳನ್ನೇ ಮಾಡಿಕೊಳ್ಳುವುದಿಲ್ಲ.

೨. **ನಷ್ಟಂ ಶೋಚಿತುಂ ನ ಇಚ್ಛಂತಿ:** ಯಾವ ಪದಾರ್ಥವು ನಷ್ಟವಾಗಿದೆಯೋ, ಅದನ್ನು ಕುರಿತು ಸುಮ್ಮನೇ ಶೋಕಿಸದವನೇ ಪಂಡಿತನು. ಸಮುದ್ರದಲ್ಲಿ ಒಂದು ಮೊಬೈಲ್ ನಷ್ಟವಾಯಿತು. ಅದು ಏನು ಮಾಡಿದರೂ ಪುನಃ ಸಿಗುವುದಿಲ್ಲ; ಅಂದಮೇಲೆ ಅದನ್ನು ಕುರಿತು ಶೋಕಿಸಬೇಕಾಗಿಲ್ಲ. ಅತ್ಯಂತ ಪ್ರಿಯರು ಮೃತರಾದರು, ಅವರಂತೂ ಬದುಕಿ ಬರಲಾರರು. ಅವರನ್ನು ಕುರಿತು ಶೋಕಿಸದಿರುವವರೇ ಪಂಡಿತರು. ಏಕೆಂದರೆ ಎಷ್ಟೇ ದುಃಖಿಸಿದರೂ ಅವರಂತೂ ತಿರುಗಿ ಬರುವುದಿಲ್ಲ.

೩. **ಆಪತ್ಸು ನ ಮುಹ್ಯಂತಿ:** ಆಪತ್ತುಗಳಲ್ಲಿ ಧೃತಿಗೆಡುವುದಿಲ್ಲ. ಜೀವನ ಎಂದಮೇಲೆ ರೋಗ ರುಜಿನ, ಮಾನ ಅಪಮಾನ, ಜನ್ಮ ಮರಣಗಳು ಬಂದೇ ಬರುತ್ತವೆ. ಆಪತ್ತು ವಿಪತ್ತುಗಳು ಮನುಷ್ಯರಿಗೆ ಬರುತ್ತವೆಯೇ ಹೊರತು ಕಬ್ಬಿಣದ, ಸಿಮೆಂಟ್ ಕಂಬಗಳಿಗಲ್ಲ. ಹೀಗೆಂದು ತಿಳಿದು ಧೃತಿಯಿಂದ ಇರುವವನೇ ಪಂಡಿತನು. ಇವನೇ ವಿವೇಕಿಯೂ ಕೂಡ.

**ವಿವೇಕಿಗಳು ದುರ್ಲಭ ಹಾಗೂ ಅಪ್ರಾಪ್ಯ ವಸ್ತುಗಳನ್ನು ಆಶಿಸಬಾರದು**

## 14. ಇಂಥ ಸ್ನೇಹಿತನನ್ನು ದೂರವಿಡಬಾರದು

ಪ್ರಾಜ್ಞೋಪಸೇವಿನಂ ವೈದ್ಯಂ ಧಾರ್ಮಿಕಂ ಪ್ರಿಯದರ್ಶನಮ್।
ಮಿತ್ರವಂತಂ ಸುವಾಕ್ಯಂ ಚ ಸುಹೃದಂ ಪರಿಪಾಲಯೇತ್॥

*ಜ್ಞಾನಿಗಳ ಸೇವೆಯಲ್ಲಿ ನಿರತನಾಗಿರುವಂಥ, ವೈದ್ಯನಾಗಿರುವಂಥ, ಧಾರ್ಮಿಕನೂ ಸುಂದರಮೂರ್ತಿಯೂ ಆಗಿರುವಂಥ, ಅನೇಕ ಮಿತ್ರರನ್ನುಳ್ಳ ಮತ್ತು ಮಧುರಭಾಷಿಯಾಗಿರುವಂಥ ಸುಹೃದನನ್ನು ಕಾಪಾಡಿಕೊಳ್ಳಬೇಕು.*

ಈ ಆರು ಗುಣಗಳನ್ನುಳ್ಳಂಥ ಸ್ನೇಹಿತನನ್ನು ಕಾಪಾಡಿಕೊಳ್ಳಬೇಕು:

೧. **ಪ್ರಾಜ್ಞೋಪಸೇವಿನಂ ಸುಹೃದಂ ಪರಿಪಾಲಯೇತ್:** ಪ್ರಾಜ್ಞರ ಅಂದರೆ ಜ್ಞಾನಿಗಳ ಸೇವೆಯನ್ನು ಮಾಡಿರುವಂಥ ಸ್ನೇಹಿತನನ್ನು ರಕ್ಷಿಸಿಕೊಳ್ಳಬೇಕು. ಸ್ನೇಹಿತರೆಂದರೆ ನಾನಾರೀತಿಯಿಂದ ಇರುತ್ತಾರೆ. ಆದರೆ ತಪಸ್ವಿಗಳ ಸೇವೆ ಮಾಡುತ್ತಿರುವಂಥ ಸ್ನೇಹಿತನನ್ನು ಯಾವಾಗಲೂ ರಕ್ಷಿಸಿಕೊಳ್ಳಬೇಕು.

೨. **ವೈದ್ಯಂ ಸುಹೃದಂ ಪರಿಪಾಲಯೇತ್:** ಸ್ನೇಹಿತನು ವೈದ್ಯನಾಗಿದ್ದರಂತೂ ಅಂಥವನನ್ನು ಎಂದೆಂದಿಗೂ ದೂರಮಾಡಿಕೊಳ್ಳಬಾರದು. ವೈದ್ಯನಾದ ಸ್ನೇಹಿತನಿಂದ ರೋಗ ರುಜಿನಾದಿಗಳಿಗೆ ಪರಿಹಾರಗಳು ದೊರಕುತ್ತವೆ.

೩. **ಧಾರ್ಮಿಕಂ ಸುಹೃದಂ ಪರಿಪಾಲಯೇತ್:** ಧರ್ಮನಿಷ್ಠನಾದ ಸ್ನೇಹಿತನನ್ನು ರಕ್ಷಿಸಿಕೊಳ್ಳಬೇಕು. ನಾವು ಧರ್ಮದಿಂದ ಜಾರಿಬಿದ್ದಾಗ ನಮ್ಮನ್ನು ಧಾರ್ಮಿಕನಾದ ಸುಹೃದನು ಎಚ್ಚರಿಸುತ್ತಾನೆ. ನಾವು ಅಧರ್ಮಮಾರ್ಗಕ್ಕೆ ಹೋಗದಂತೆ ನಮ್ಮನ್ನು ಈ ಧಾರ್ಮಿಕ ಸುಹೃದನು ಕಾಪಾಡುತ್ತಾನೆ.

೪. **ಪ್ರಿಯದರ್ಶನಂ ಸುಹೃದಂ ಪರಿಪಾಲಯೇತ್:** ಸುಹೃದನು ಸುಂದರಾಂಗನಾಗಿದ್ದರಂತೂ ಅವನನ್ನು ಎಂದಿಗೂ ದೂರಮಾಡಬಾರದು.

೫. **ಮಿತ್ರವಂತಂ ಸುಹೃದಂ ಪರಿಪಾಲಯೇತ್:** ಅನೇಕ ಸ್ನೇಹಿತರನ್ನುಳ್ಳಂಥ ಸುಹೃದನನ್ನಂತೂ ಚೆನ್ನಾಗಿ ಕಾಪಾಡಿಕೊಳ್ಳಬೇಕು. ನಮಗೆ ಇವನೊಬ್ಬನೇ ಸ್ನೇಹಿತನಾದರೆ ಅವನಿಗೆ ನೂರಾರು ಸ್ನೇಹಿತರಿದ್ದಾರೆ. ಇವನ ಮೂಲಕ ಅವರೆಲ್ಲರೂ ನಮಗೆ ಸ್ನೇಹಿತರೇ ಆಗಿಬಿಡುತ್ತಾರಲ್ಲವೇ?

೬. **ಸುವಾಕ್ಯಂ ಸುಹೃದಂ ಪರಿಪಾಲಯೇತ್:** ಮೃದುವಾದ, ಮಧುರವಾದ, ಪ್ರಿಯವಾದ ಮಾತುಗಳನ್ನಾಡುವಂಥ ಸ್ನೇಹಿತರನ್ನು ಬಿಡಬಾರದು. ಪ್ರಿಯವಾಕ್ಯಪ್ರಧಾನನಾದ ಮಿತ್ರನು ಎಲ್ಲರಿಗೂ ಪ್ರಿಯನೇ ಆಗಿರುತ್ತಾನಲ್ಲವೇ?

**ಪ್ರಜ್ಞಾವಂತನಾದ ಧಾರ್ಮಿಕನನ್ನೇ ಸ್ನೇಹಿತನನ್ನಾಗಿ ಮಾಡಿಕೊಳ್ಳಬೇಕು**

# 15. ಆರ್ಜವದ ಮಹತ್ತ್ವ

**ಸರ್ವತೀರ್ಥೇಷು ವಾ ಸ್ನಾನಂ ಸರ್ವಭೂತೇಷು ಚಾರ್ಜವಮ್ ।**
**ಉಭೇ ತ್ವೇತೇ ಸಮೇ ಸ್ಯಾತಾಮಾರ್ಜವಂ ವಾ ವಿಶಿಷ್ಯತೇ ॥**

*ಸರ್ವತೀರ್ಥಗಳಲ್ಲಿಯೂ ಸ್ನಾನಮಾಡುವುದು, ಮತ್ತು ಎಲ್ಲಾ ಪ್ರಾಣಿಗಳ ವಿಷಯದಲ್ಲಿಯೂ ಪ್ರೀತಿಯಿಂದ, ಕಾಪಟ್ಯವಿಲ್ಲದೇ ನಡೆದುಕೊಳ್ಳುವುದು—ಇವೆರಡೂ ಸಮವೇ ಆಗಿರುತ್ತವೆ. ಅಥವಾ ಇವೆರಡರಲ್ಲಿ ಆರ್ಜವವೇ ಹೆಚ್ಚಿನದಾಗಿರುತ್ತದೆ.*

ತೀರ್ಥಸ್ನಾನವು ಅತ್ಯಂತ ಪುಣ್ಯಕರವಾದದ್ದು. ಸಮುದ್ರಸ್ನಾನ, ಗಂಗಾ ಯಮುನಾ ನದೀಸ್ನಾನ, ತ್ರಿವೇಣೀ ಸಂಗಮಸ್ನಾನ, ಪುಷ್ಕರಸ್ನಾನ, ಕುಂಭಮೇಳ ಸ್ನಾನ—ಹೀಗೆ ಭೂಮಿಯ ಮೇಲಿರುವ ಸಕಲ ತೀರ್ಥಗಳಲ್ಲಿ ಸ್ನಾನವನ್ನು ಮಾಡುವುದು ಎಂಬುದು ಅತ್ಯಂತ ಶ್ರೇಷ್ಠ ಎಂದು ಶಾಸ್ತ್ರಗಳು ಹೇಳುತ್ತವೆ. ಆದ್ದರಿಂದಲೇ ಮಾನವರು ತೀರ್ಥಸ್ನಾನಕ್ಕಾಗಿಯೇ ಕಾಶೀ, ಅಯೋಧ್ಯಾ, ಹೃಷೀಕೇಶ, ಹರಿದ್ವಾರಗಳಿಗೆ ಹೋಗುತ್ತಾರೆ. ಇದರಿಂದ ಪುಣ್ಯವು ಪ್ರಾಪ್ತವಾಗುತ್ತದೆ.

ಇನ್ನು, ಎಲ್ಲಾ ಪ್ರಾಣಿಗಳನ್ನೂ ಪ್ರೀತಿಸುತ್ತಾ ಇದ್ದರೆ, ಅದರಲ್ಲೂ ಸಕಲ ಮಾನವರನ್ನೂ ಪ್ರೀತಿಯಿಂದ ಕಾಣುತ್ತಾ ಇದ್ದರೆ ಇದರಿಂದಲೂ ಪುಣ್ಯವು ಲಭಿಸುತ್ತದೆ. ಕಾಪಟ್ಯವಿಲ್ಲದೇ ಆರ್ಜವ ಗುಣವುಳ್ಳವನಾಗಿ ಜೀವನವನ್ನು ನಡೆಸುತ್ತಿದ್ದರೆ ಅದೇ ದೊಡ್ಡ ತಪಸ್ಸು ಎನಿಸುತ್ತದೆ. ಕಾಯೇನ, ವಾಚಾ, ಮನಸಾ—ತ್ರಿಕರಣ ಶುದ್ಧಿಯಿಂದ ಎಲ್ಲರನ್ನೂ ಪ್ರೀತಿಸುವುದು ಎಂಬುದು ಸುಲಭವಲ್ಲ; ಇದು ಪ್ರಯತ್ನಸಾಧ್ಯವಾದ ದೊಡ್ಡ ಸಾಧನವೇ ಹೌದು.

ಸರ್ವತೀರ್ಥಸ್ನಾನ, ಸರ್ವಭೂತಾನುಕಂಪ—ಇವೆರಡೂ ಸಮಾನವಾಗಿ ಪುಣ್ಯಕರ್ಮಗಳೇ ಹೌದು. ಈ ಎರಡರಿಂದಲೂ ಮಾನವನಿಗೆ ಉತ್ತಮವಾದ ಫಲಗಳೇ ಆಗುತ್ತವೆ. ಆದರೆ, ನಿಜವಾಗಿ ನೋಡಿದರೆ ಸರ್ವತೀರ್ಥಸ್ನಾನಕ್ಕಿಂತಲೂ ಸರ್ವಭೂತಪ್ರೀತಿ, ಆರ್ಜವ, ಸರ್ವಾತ್ಮಭಾವವೇ ಹೆಚ್ಚಿನ ತಪಸ್ಸೆಂದು ತಿಳಿಯಬೇಕು. ಏಕೆಂದರೆ ಸರ್ವತೀರ್ಥಸ್ನಾನವನ್ನು ಯಾರು ಬೇಕಾದರೂ ಯಾಂತ್ರಿಕವಾಗಿ ಮಾಡಬಹುದು, ಆದರೆ ಸರ್ವಭೂತಪ್ರೀತಿಯನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು. ಈಗಿನ ಕಾಲದಲ್ಲಿ ಹಣವನ್ನು ಖರ್ಚುಮಾಡಿ ಏರೋಪ್ಲೇನ್ ಮೂಲಕ ಯಾವ ತೀರ್ಥಕ್ಷೇತ್ರಕ್ಕೂ ಹೋಗಿಬರಬಹುದು. ಆದರೆ ಆರ್ಜವಸಂಪತ್ತು ಪ್ರಯತ್ನಸಾಧ್ಯ. ಇದೇ ಮುಖ್ಯವಾದದ್ದು.

**ಸಾಧಕರು ಸರ್ವಮಾನವರನ್ನೂ ಪ್ರೀತಿಯಿಂದ ಕಾಣಬೇಕು**

# 16. ಯಾರಿಗೆ ಯಾವುದು ಬಲ?

ಹಿಂಸಾ ಬಲಮಸಾಧೂನಾಂ ರಾಜ್ಞಾಂ ದಂಡವಿಧಿರ್ಬಲಮ್ ।
ಶುಶ್ರೂಷಾ ತು ಬಲಂ ಸ್ತ್ರೀಣಾಂ ಕ್ಷಮಾ ಗುಣವತಾಂ ಬಲಮ್ ॥

*ದುಷ್ಟಜನರಿಗೆ ಹಿಂಸೆಯೇ ಬಲವು, ರಾಜರಿಗೆ ದಂಡವಿಧಿಯೇ ಬಲವು, ಸ್ತ್ರೀಯರಿಗೆ ಶುಶ್ರೂಷೆಯೇ ಬಲವು, ಸಜ್ಜನರಿಗೆ ಕ್ಷಮೆಯೇ ಬಲವು.*

೧. **ಹಿಂಸಾ ಬಲಮಸಾಧೂನಾಮ್:** ಅಸಾಧುಗಳಿಗೆ ಎಂದರೆ ದುಷ್ಟರಿಗೆ, ಎಂದರೆ ರೌಡಿಗಳಿಗೆ ಹಿಂಸೆಯೇ ಬಲವು. ಸಜ್ಜನರಿಗೆ ಹಿಂಸೆಯನ್ನು ಉಂಟು ಮಾಡುವುದೇ ದುಷ್ಟರ ಬಲ. ರಾವಣ, ಕುಂಭಕರ್ಣ, ಕಂಸ ಮುಂತಾದ ದುಷ್ಟರಿಗೆ ಇರುವ ಬಲ ಎಂದರೆ ಹಿಂಸೆಮಾಡುವುದು. ದುಷ್ಟರು ಜಗತ್ತಿಗೆ ತೊಂದರೆಯನ್ನು ಮಾಡುತ್ತಿರುತ್ತಾರೆ; ದುಷ್ಟರು ಸಾಧುಸಂತರಿಗೆ ಸುಮ್ಮನೇ ಹಿಂಸೆ ಮಾಡುತ್ತಿರುತ್ತಾರೆ. ಏಕೆಂದರೆ ಇದೇ ಅವರಿಗೆ ಶಕ್ತಿ, ಬಲವು.

೨. **ರಾಜ್ಞಾಂ ದಂಡವಿಧಿರ್ಬಲಮ್:** ಶಿಕ್ಷೆಯನ್ನು ವಿಧಿಸುವುದೇ ರಾಜರಿಗೆ ಬಲವು. ಅಪರಾಧವನ್ನು ಮಾಡಿದವರಿಗೆ ದಂಡವನ್ನು ಎಂದರೆ ತಕ್ಕ ಶಿಕ್ಷೆಯನ್ನು ಅಪರಾಧಿಗಳಿಗೆ ವಿಧಿಸುವುದೇ ಸರ್ಕಾರದ ಬಲ. ಅಪರಾಧ ಗಳು ನೂರಾರು ರೀತಿಯಲ್ಲಿರುತ್ತವೆ. ಕಳ್ಳತನ, ಮೋಸ, ವಂಚನೆ, ಪರಸ್ಪರ ಜಗಳ, ಕಾನೂನಿಗೆ ಬಾಹಿರವಾದ ಚಟುವಟಿಕೆ, ವೇಶ್ಯಾಗೃಹಗಳು ಇತ್ಯಾದಿ ಅಪರಾಧಗಳನ್ನು ಜನಗಳು ಮಾಡುತ್ತಾರೆ. ಸರ್ಕಾರಕ್ಕೆ ಇದು ತಿಳಿದಾಗ ಅಂಥವರಿಗೆ ಶಿಕ್ಷೆಯನ್ನು ಸರ್ಕಾರವು ವಿಧಿಸುತ್ತದೆ.

೩. **ಸ್ತ್ರೀಣಾಂ ಶುಶ್ರೂಷಾ ಬಲಂ:** ಸ್ತ್ರೀಯರಿಗೆ ಶುಶ್ರೂಷೆಯೇ ಬಲವು. ಸ್ತ್ರೀಯರಿಗೇನಾದರೂ ಕೋಪಬಂದಾಗ, ತಮ್ಮ ಗಂಡಂದಿರು ಸ್ತ್ರೀಯರನ್ನು ಬೈದಾಗ, ಸ್ತ್ರೀಯರು ಅವರ ಸೇವೆಯನ್ನು ಚೆನ್ನಾಗಿ ಮಾಡಿಬಿಟ್ಟರೆ ಎಲ್ಲವೂ ಸರಿಯಾಗಿಬಿಡುತ್ತದೆ. ಕುಟುಂಬದಲ್ಲಿನ ಕಲಹಗಳನ್ನು ಸರಿಪಡಿಸಬೇಕಾದರೆ ಸ್ತ್ರೀಯರಿಗೆ ಪ್ರೀತಿಪೂರ್ವಕವಾದ ಸೇವೆಯೇ ಬಲ.

೪. **ಕ್ಷಮಾ ಗುಣವತಾಂ ಬಲಂ:** ಸಜ್ಜನರಿಗೆ ಕ್ಷಮಾಗುಣವೇ ಬಲವು. ದುಷ್ಟರು ಸಜ್ಜನರಿಗೆ ಹಿಂಸೆಯನ್ನು ಮಾಡಿದರೂ, ಸಜ್ಜನರು ಅವರಿಗೆ ಯಾವ ಪ್ರತೀಕಾರವನ್ನೂ ಮಾಡದೇ ಶಾಂತರಾಗಿರುತ್ತಾರೆ. ಸಜ್ಜನರೆಂದರೆ ಎಲ್ಲರನ್ನೂ ಪ್ರೀತಿಮಾಡುವ ಮಹಾತ್ಮರು. ಕ್ಷಮೆಯಿಂದಲೇ ಎಲ್ಲರನ್ನೂ ಆಶೀರ್ವದಿಸುವ ಈ ಸಂತರಿಗೆ ಯಾರ ಮೇಲೂ ಕೋಪವು ಇರುವುದಿಲ್ಲ.

**ಮಾನವರು ಆದಷ್ಟೂ ಕ್ಷಮಾಗುಣವನ್ನು ಬೆಳೆಸಿಕೊಳ್ಳಬೇಕು**

# 17. ಒಳಗಿನ ಶತ್ರುಗಳನ್ನು ಗೆಲ್ಲಬೇಕು

ಯಃ ಪಂಚಾಭ್ಯಂತರಾನ್ ಶತ್ರೂನನಿರ್ಜಿತ್ಯ ಮನೋಮಯಾನ್ ।
ಜಿಗೀಷತಿ ರಿಪೂನನ್ಯಾನ್ ರಿಪವೋಽಭಿಭವಂತಿ ತಮ್ ॥

*ಯಾವಾತನು ತನ್ನೊಳಗೇ ಇರುವ ಜ್ಞಾನೇಂದ್ರಿಯಗಳೆಂಬ ಐದು ಶತ್ರುಗಳನ್ನು ಜಯಿಸದೇ, ಹೊರಗಿರುವ ಬೇರೆಯ ಶತ್ರುಗಳನ್ನು ಗೆಲ್ಲಲು ಬಯಸುತ್ತಾನೆಯೋ, ಅಂಥವನನ್ನು ಆ ಶತ್ರುಗಳು ಸೋಲಿಸುತ್ತಾರೆ.*

ಶತ್ರುಗಳು ಹೊರಗಿನವರೆಂದೂ ಒಳಗಿನವರೆಂದೂ ಎರಡು ರೀತಿಯಿಂದ ಇರುತ್ತಾರೆ. ಬಾಹ್ಯಶತ್ರುಗಳು ಕಣ್ಣುಗಳಿಗೆ ಕಾಣಿಸುತ್ತಾರೆ. ಆದರೆ ಆಭ್ಯಂತರ ಶತ್ರುಗಳು ಕಣ್ಣುಗಳಿಗೆ ಕಾಣಿಸದೇ ಒಳಗಡೆಯಲ್ಲಿಯೇ ಇದ್ದುಕೊಂಡು ನಮಗೆ ಹಿಂಸೆಮಾಡುತ್ತಾ ಇರುತ್ತಾರೆ. ಹೊರಗಿನ ಶತ್ರುಗಳಿಗಿಂತಲೂ ಒಳಗಿನ ಶತ್ರುಗಳ ಕಾಟವೇ ಪ್ರಬಲವಾಗಿರುತ್ತದೆ. ಆದ್ದರಿಂದ ಬುದ್ಧಿವಂತನಾದ, ಜಾಣನಾದ ಮನುಷ್ಯನು ಮೊದಲು ಅಂತಃಶತ್ರುಗಳನ್ನು ಜಯಿಸಬೇಕು. ಆಮೇಲೆ ಇದರಿಂದ ಬಾಹ್ಯಶತ್ರುಗಳನ್ನೂ ಸುಲಭವಾಗಿ ಪರಾಭವಗೊಳಿಸಬಹುದು.

ಸರಿ, ಪ್ರಕೃತದಲ್ಲಿ, ಆ ಆಂತರಶತ್ರುಗಳು ಯಾರು? ಎಂದರೆ, ಪಂಚ ಜ್ಞಾನೇಂದ್ರಿಯಗಳು; ನೇತ್ರ, ಶ್ರೋತ್ರ, ಘ್ರಾಣ, ರಸನ, ತ್ವಕ್‌ಗಳೆಂಬ ಪಂಚ ಜ್ಞಾನೇಂದ್ರಿಯಗಳೇ ಮಾನವರಿಗೆ ಒಳಗಿನ ಶತ್ರುಗಳು; ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ಚರ್ಮೇಂದ್ರಿಯಗಳು ಒಳಗಡೆ ಇರುತ್ತವೆ. ಈ ಐದು ಜ್ಞಾನೇಂದ್ರಿಯಗಳು ಹೊರಗಿರುವ ರೂಪ, ಶಬ್ದ, ಗಂಧ, ರಸ, ಸ್ಪರ್ಶಗಳನ್ನು ಅರಿಯುತ್ತಾ ಮಾನವನನ್ನು ಬಹಿರ್ಮುಖಿನನ್ನಾಗಿ ಮಾಡಿರುತ್ತವೆ. ಈ ಇಂದ್ರಿಯ ಗಳು ನೋಡಬಾರದ್ದನ್ನು ನೋಡುತ್ತಾ, ಕೇಳಬಾರದ್ದನ್ನು ಕೇಳುತ್ತಾ; ನೋಡ ಬೇಕಾದ್ದನ್ನು ನೋಡದೇ, ಕೇಳಬೇಕಾದ್ದನ್ನು ಕೇಳದೇ, ಜೀವಾತ್ಮನಿಗೆ ನಿತ್ಯ ಅಶಾಂತಿ, ಅನರ್ಥಗಳನ್ನೇ ಉಂಟುಮಾಡುತ್ತಿವೆ; ಇಂದ್ರಿಯಗಳನ್ನು ಗೆಲ್ಲಬೇಕು.

ಈ ಒಳಗಿನ ಇಂದ್ರಿಯಗಳೆಂಬ ಶತ್ರುಗಳಿಗೆ ದಾಸರಾಗಿ, ಇವುಗಳನ್ನು ಗೆಲ್ಲದೇ, ಬರೀ ಹೊರಗಿರುವ ಶತ್ರುಗಳನ್ನೇ ಜಯಿಸಲು ಪ್ರಯತ್ನವನ್ನು ಮಾಡು ತ್ತಿದ್ದರೆ, ಅಂಥವರನ್ನು ಹೊರಗಿನ ಶತ್ರುಗಳು ಸುಲಭವಾಗಿ ಪರಾಭವಗೊಳಿಸು ತ್ತಾರೆ. ಏಕೆಂದರೆ ಅಂತಃಶತ್ರುಗಳು ಒಳಗಡೆಯಲ್ಲಿಯೇ ಇದ್ದುಕೊಂಡು ಇವರನ್ನು ಪರಾಭವಿಸಿರುತ್ತಾರಲ್ಲ! ಆದ್ದರಿಂದ ಉಪಾಯದಿಂದ ಅಂತಃಶತ್ರುಗಳನ್ನು ಜಯಿಸಿದವನೇ ನಿಜವಾಗಿ ಜಯಶಾಲಿಯಾದ ಮಾನವನು!

**ಒಳಗಿನ ಇಂದ್ರಿಯಗಳನ್ನು ಜಯಿಸಿದವನಿಗೆ ಶತ್ರುಗಳೇ ಇರುವುದಿಲ್ಲ**

# 18. ಮೂರ್ಖನ ಲಕ್ಷಣಗಳು

ಅಶ್ರುತಶ್ಚ ಸಮುನ್ನದ್ಧಃ ದರಿದ್ರಶ್ಚ ಮಹಾಮನಾಃ।
ಅರ್ಥಾಂಶ್ಚಾಕರ್ಮಣಾ ಪ್ರೇಪ್ಸುಃ ಮೂಢ ಇತ್ಯುಚ್ಯತೇ ಬುಧೈಃ॥

*ಯಾವಾತನು ಶಾಸ್ತ್ರಾಧ್ಯಯನಮಾಡದಿದ್ದರೂ ಗರ್ವಿಷ್ಠನಾಗಿರುತ್ತಾನೆಯೋ, ದರಿದ್ರನಾಗಿದ್ದರೂ ತನ್ನನ್ನು ದೊಡ್ಡ ಶ್ರೀಮಂತನೆಂದು ತಿಳಿಯುತ್ತಾನೆಯೋ, ಸೋಮಾರಿಯಾಗಿದ್ದುಕೊಂಡೇ ದೊಡ್ಡದೊಡ್ಡ ಗುರಿಗಳನ್ನು ಮುಟ್ಟಬೇಕೆಂದು ಬಯಸುತ್ತಾನೆಯೋ, ಅಂಥವನನ್ನು ಬುಧರು* ***ಮೂಢ****ನೆನ್ನುತ್ತಾರೆ.*

ಮೂಢನ ಮೂರು ಲಕ್ಷಣಗಳನ್ನು ಇಲ್ಲಿ ಹೇಳಿದೆ:

೧. **ಅಶ್ರುತಃ ಅಪಿ ಸಮುನ್ನದ್ಧಃ ಮೂಢಃ:** ಶಾಸ್ತ್ರಪಾಂಡಿತ್ಯವಿಲ್ಲದಿದ್ದರೂ ತಾನು ದೊಡ್ಡ ವಿದ್ವಾಂಸನಂತೆ ಗರ್ವಿಷ್ಠನಾಗಿರುವವನು ಮೂಢನು. ಶಾಸ್ತ್ರ ವಿದ್ವಾಂಸರೇ ಆದರೂ ಅವರು ಸಾತ್ತ್ವಿಕರಾಗಿ ವಿನೀತರಾಗಿರುತ್ತಾರೆ. ಆದರೆ ಮೂಢರು ಮಾತ್ರ ಯಾವ ಶಾಸ್ತ್ರವನ್ನೂ ಅಧ್ಯಯನಮಾಡದಿದ್ದರೂ ಬಾಹ್ಯಾಡಂಬರಗಳಿಂದ ಕೂಡಿ ದೊಡ್ಡ ಪಂಡಿತರಂತೆ ಮೆರೆಯುತ್ತಾರೆ.

೨. **ಮೂಢಃ ದರಿದ್ರೋऽಪಿ ಮಹಾಮನಾಃ:** ಮೂಢನಾದವನು ತಾನು ಸ್ವತಃ ಬಡವನೇ ಆಗಿದ್ದರೂ ದೊಡ್ಡದೊಡ್ಡ ಆಶೆ ಆಕಾಂಕ್ಷೆಗಳನ್ನು ಇಟ್ಟುಕೊಂಡಿರುತ್ತಾನೆ. ತನ್ನಲ್ಲಿ ಸಾವಿರ ರೂಪಾಯಿಗಳು ಇಲ್ಲದಿದ್ದರೂ, ತಾನು ಕುಬೇರನಂತೆ ಇರಬೇಕು ಎಂದು ಆಶೆಪಡುವವನು ಮೂಢನಲ್ಲದೇ ಮತ್ತೇನು? ಶ್ರೀಮಂತರು ಸರಳರಾಗಿರುತ್ತಾರೆ. ಆದರೆ ಈ ಮೂರ್ಖರು ಮಾತ್ರ ಕೈಯಲ್ಲಿ ಕಾಸಿಲ್ಲದಿದ್ದರೂ ಕೈಲಾಸಕ್ಕೆ ಹೋಗಬೇಕೆನ್ನುತ್ತಾರೆ.

೩. **ಅಕರ್ಮಣಾ ಅರ್ಥಾನ್ ಪ್ರೇಪ್ಸುಃ:** ಏನನ್ನೂ ಮಾಡದೇ ಸುಮ್ಮನೇ ಕೂತುಕೊಂಡು, ಕೋಟಿಗಟ್ಟಲೆ ಲೆಕ್ಕಮಾಡುವವನು ಮೂಢನಲ್ಲದೇ ಮತ್ತೇನು? ಸೋಮಾರಿಯಾಗಿದ್ದು, ಅರಮನೆಯಂಥ ಮನೆಯನ್ನು ಹೊಂದಬೇಕೆಂದು ಬಯಸುವವನು ಮೂಢನು. ಸ್ವತಃ ಉದ್ಯೋಗಿಯಾಗದೇ ತಾನು ಶ್ರೀಮಂತರಂತೆ ಆಗಬೇಕೆಂದು ಆಶೆಪಡುತ್ತಾನೆ. ಮೈ ಬಗ್ಗಿಸಿ ದುಡಿಯುವ ಪ್ರವೃತ್ತಿಯೇ ಇಲ್ಲದೇ, ಸುಮ್ಮನೆ ಅಲ್ಲಿ ಇಲ್ಲಿ ಓಡಾಡುತ್ತಾ ಇದ್ದುಕೊಂಡು, ದೊಡ್ಡದೊಡ್ಡ ಶ್ರೀಮಂತರಂತಾಗಬೇಕು, ಮಹಾಮಹಾ ವಿದ್ವಾಂಸರಂತೆ ಸನ್ಮಾನಗಳನ್ನು ಮಾಡಿಸಿಕೊಳ್ಳಬೇಕೆಂದು ಬಯಸುವವನು ಮೂಢನಲ್ಲವೇ?

**ಪ್ರತಿಯೊಂದಕ್ಕೂ ಮನುಷ್ಯನು ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕು**

# 19. ಯಾರಿಗೆ ಯಾವುದು ಕಣ್ಣು?

ಗಂಧೇನ ಗಾವಃ ಪಶ್ಯಂತಿ ವೇದೈಃ ಪಶ್ಯಂತಿ ಬ್ರಾಹ್ಮಣಾಃ।
ಚಾರೈಃ ಪಶ್ಯಂತಿ ರಾಜಾನಃ ಚಕ್ಷುರ್ಭ್ಯಾಮಿತರೇ ಜನಾಃ॥

*ಹಸುಗಳು ವಾಸನೆಯಿಂದ ನೋಡುತ್ತವೆ, ಬ್ರಾಹ್ಮಣರು ವೇದಶಾಸ್ತ್ರಗಳಿಂದ ನೋಡುತ್ತಾರೆ, ರಾಜರುಗಳು ಗೂಢಚಾರರಿಂದ ವಿಷಯಗಳನ್ನು ತಿಳಿಯುತ್ತಾರೆ; ಆದರೆ ಸಾಮಾನ್ಯ ಜನಗಳು ಬಾಹ್ಯ ಕಣ್ಣುಗಳಿಂದ ಮಾತ್ರ ನೋಡುತ್ತಾರೆ.*

೧. **ಗಂಧೇನ ಗಾವಃ ಪಶ್ಯಂತಿ:** ಹಸುಗಳು ಮತ್ತು ಎತ್ತುಗಳು ಗಂಧದಿಂದಲೇ ವಸ್ತುಗಳನ್ನು ಅರಿಯುತ್ತವೆ. ಪಶುಗಳಿಗೆ ಭಗವಂತನು ಕೊಟ್ಟಿರುವ ಒಂದು ಅದ್ಭುತಶಕ್ತಿ ಎಂದರೆ ಮೂಗು. ಮೂಸಿನೋಡಿದ ಕೂಡಲೇ ಪಶುಗಳಿಗೆ ಆ ವಸ್ತುಗಳ ರುಚಿ, ಸ್ವಭಾವವು ಅರ್ಥವಾಗಿಬಿಡುತ್ತದೆ. ಬಾಳೆಹಣ್ಣನ್ನು ಮೂಸಿ, ಅನಂತರ ತಿನ್ನುತ್ತವೆ; ಜಿಲೇಬಿ, ಮೈಸೂರ್‌ಪಾಕ್‌ಗಳನ್ನು ಮೂಸಿ ನೋಡಿ ಪಶುಗಳು ತಿನ್ನುವುದಿಲ್ಲ. ಅಂತೂ ವಾಸನೆಯಿಂದಲೇ ಪಶುಗಳು ಆ ವಸ್ತುವಿನ ರುಚಿ, ರಸಗಳನ್ನು ಕಂಡುಹಿಡಿದುಬಿಡುತ್ತವೆ!

೨. **ಬ್ರಾಹ್ಮಣಾಃ ವೇದೈಃ ಪಶ್ಯಂತಿ:** ಬ್ರಾಹ್ಮಣರು ವೇದಗಳಿಂದ ನೋಡುತ್ತಾರೆ. ಬ್ರಾಹ್ಮಣರು ಎಂದರೆ ಯಜ್ಞ, ಯಾಗಾದಿಗಳನ್ನು ಮಾಡುತ್ತಿರುವವರು. ಇವರಿಗೆ ವೇದಗಳೇ ಕಣ್ಣುಗಳು. ಪ್ರತ್ಯಕ್ಷ ಪ್ರಮಾಣಗಳಿಂದ ಕಾಣಲಾಗದ, ಲೋಕಾಂತರ ಜನ್ಮಾಂತರಗಳ ವಿಷಯಗಳನ್ನೆಲ್ಲ ಬ್ರಾಹ್ಮಣರು ವೇದಶಾಸ್ತ್ರಗಳಿಂದಲೇ ತಿಳಿಯುತ್ತಾರೆ, ಇತರರಿಗೆ ತಿಳಿಸುತ್ತಾರೆ ಕೂಡ. ಇಂಥ ಹೋಮದಿಂದ ಇಂಥ ಫಲವಾಗುತ್ತದೆ ಎಂಬುದನ್ನು ಬ್ರಾಹ್ಮಣರುಗಳು ವೇದಗಳಿಂದಲೇ ತಿಳಿಸುತ್ತಾರಲ್ಲವೇ?

೩. **ಚಾರೈಃ ಪಶ್ಯಂತಿ ರಾಜಾನಃ:** ರಾಜರು ಅರಮನೆಯಲ್ಲಿಯೇ ವಾಸವಾಗಿದ್ದರೂ ಗೂಢಚಾರರ ಮೂಲಕ ಇಡೀ ದೇಶದ ಸ್ಥಿತಿಗತಿಗಳನ್ನು ಅರಿಯುತ್ತಾರಲ್ಲವೇ? ಹೀಗಾಗಿ ರಾಜರಿಗೆ ಗೂಢಚಾರರೇ ಕಣ್ಣಿನಂತಿರುತ್ತಾರೆ. ಗೂಢಚಾರರಿಂದ ಲೋಕದ ಸಮಾಚಾರವನ್ನೆಲ್ಲ ತಿಳಿದು ರಾಜರು ಲೋಕಕಲ್ಯಾಣವನ್ನು ಮಾಡುತ್ತಾರೆ. ಏಕೆಂದರೆ ರಾಜರು ಪ್ರತಿಯೊಂದು ಹೋಬಳಿಗೂ ಹೋಗಲು ಸಾಧ್ಯವಾಗುವುದಿಲ್ಲ.

೪. **ಚಕ್ಷುರ್ಭ್ಯಾಮ್ ಇತರೇ ಜನಾಃ:** ಇನ್ನುಳಿದ ಜನಗಳು ತಮ್ಮ ಸ್ವಂತ ಹೊರಗಿನ ಕಣ್ಣುಗಳಿಂದಷ್ಟೇ ವಸ್ತುಗಳನ್ನು ನೋಡುತ್ತಾರೆ.

**ಬ್ರಾಹ್ಮಣರು, ಆಸ್ತಿಕರು ವೇದಶಾಸ್ತ್ರಗಳನ್ನು ನಂಬಬೇಕು**

## 20. ಪಂಡಿತನ ನಾಲ್ಕು ಲಕ್ಷಣಗಳು

ನಿಷೇವತೇ ಪ್ರಶಸ್ತಾನಿ ನಿಂದಿತಾನಿ ನ ಸೇವತೇ।
ಅನಾಸ್ತಿಕಃ ಶ್ರದ್ದಧಾನಃ ಏತತ್ ಪಂಡಿತಲಕ್ಷಣಮ್॥

*ಸತ್ಕರ್ಮಗಳನ್ನು ಮಾಡುತ್ತಾನೆ, ನಿಂದಿತ ಕೆಲಸಗಳನ್ನು ಎಂದಿಗೂ ಮಾಡುವುದಿಲ್ಲ ; ನಾಸ್ತಿಕನಲ್ಲದವನು, ವೇದಶಾಸ್ತ್ರಗುರುವಾಕ್ಯಗಳನ್ನು ಶ್ರದ್ಧೆಯಿಂದ ನಂಬುತ್ತಾನೆ;—ಈ ನಾಲ್ಕು, ಪಂಡಿತನ ಲಕ್ಷಣಗಳು.*

ಪಂಡಿತನ ನಾಲ್ಕು ಲಕ್ಷಣಗಳನ್ನು ಇಲ್ಲಿ ಹೇಳಿದೆ:

೧. **ಪ್ರಶಸ್ತಾನಿ ನಿಷೇವತೇ:** ಪ್ರಶಸ್ತಕರ್ಮಗಳನ್ನು ಮಾಡುವವನೇ ಪಂಡಿತನು. ಜಪ, ತಪ, ದಾನ, ಧರ್ಮ, ಪರೋಪಕಾರಗಳನ್ನು ಮಾಡುತ್ತಿರುವವನೇ ಪಂಡಿತನು. ಸತ್ಯ, ಅಹಿಂಸಾ, ನ್ಯಾಯ, ಧರ್ಮಗಳನ್ನು ಸ್ವತಃ ಅನುಷ್ಠಾನ ಮಾಡುತ್ತಾ ಜನಗಳಿಗೆ ಸನ್ಮಾರ್ಗವನ್ನು ತೋರಿಸುವ ಸಂತನೇ ಪಂಡಿತನು.

೨. **ನಿಂದಿತಾನಿ ನ ಸೇವತೇ:** ನಿಂದಿತಕರ್ಮಗಳನ್ನು ಮಾಡದವನೇ ಪಂಡಿತನು. ನಿಂದಿತಕರ್ಮಗಳೆಂದರೆ ನಿಷಿದ್ಧಕರ್ಮಗಳು. ಉದಾಹರಣೆಗೆ: ಕಳ್ಳತನ, ಮೋಸ, ಅನೃತ, ವಂಚನೆ, ಅನಾಚಾರ, ದುರಾಚಾರಗಳನ್ನು ಮಾಡದಿರುವವನೇ ಪಂಡಿತನು. ಮಾಂಸಭಕ್ಷಣ, ಮದ್ಯಪಾನ, ಅತ್ಯಾಚಾರಗಳನ್ನು ಪಂಡಿತನು ಕನಸಿನಲ್ಲೂ ಆಚರಿಸುವುದಿಲ್ಲ. ನಿಂದಿತ ಕರ್ಮಗಳನ್ನು ಆಚರಿಸಬಾರದೆಂದು ಇವನು ಜನಗಳಿಗೂ ತಿಳಿಸುತ್ತಾನೆ. ವೇದಶಾಸ್ತ್ರಪುರಾಣಾದಿ ಧರ್ಮಗ್ರಂಥಗಳಲ್ಲಿ ಪ್ರತಿಷೇಧಿತವಾಗಿರುವ ಯಾವುದೇ ನಿಂದಿತಕರ್ಮಗಳನ್ನು ಮಾಡದಿರುವವನೇ ಪಂಡಿತನು.

೩. **ಅನಾಸ್ತಿಕಃ ಪಂಡಿತಃ:** ನಾಸ್ತಿಕನಾಗದವನೇ ಪಂಡಿತನು. ಆಸ್ತಿಕನಾದವನೇ ಪಂಡಿತ. ಆಸ್ತಿಕನೆಂದರೆ **ದೇವಃ ಅಸ್ತಿ, ಆತ್ಮಾ ಅಸ್ತಿ, ಲೋಕಾಂತರಮ್ ಅಸ್ತಿ, ಪುಣ್ಯಮ್ ಅಸ್ತಿ, ಪಾಪಮ್ ಅಸ್ತಿ**—ಎಂದು ನಂಬುವವನು. ಪ್ರತ್ಯಕ್ಷಪ್ರಮಾಣಕ್ಕೆ ಕಾಣಿಸದಿದ್ದರೂ ದೇವರನ್ನೂ, ಪುಣ್ಯಪಾಪಗಳನ್ನೂ ಇವೆ ಎನ್ನುವವನೇ ಆಸ್ತಿಕನು. ಪಂಡಿತನೆಂದರೆ ಆಸ್ತಿಕನಾಗಿರುತ್ತಾನೆ.

೪. **ಶ್ರದ್ದಧಾನಃ ಪಂಡಿತಃ:** ಶಾಸ್ತ್ರಗಳ ಮಾತುಗಳಲ್ಲಿ ಶ್ರದ್ಧೆಯುಳ್ಳವನೇ ಪಂಡಿತನು. **'ಶ್ರದ್ಧಾವಾನ್ ಲಭತೇ ಜ್ಞಾನಮ್'** ಎಂದು (೪-೩೯) ಗೀತಾಚಾರ್ಯನೂ ಇದನ್ನೇ ಹೇಳಿದ್ದಾನೆ.

**ಮನುಷ್ಯನು ಶ್ರದ್ಧಾವಂತನೂ ಆಸ್ತಿಕನೂ ಆಗಿರಬೇಕು**

# 21. ಇಂಥವನು ಮೂರ್ಖನು

ಅಮಿತ್ರಂ ಕುರುತೇ ಮಿತ್ರಂ ಮಿತ್ರಂ ದ್ವೇಷ್ಟಿ ಹಿನಸ್ತಿ ಚ ।
ಕರ್ಮ ಚಾರಭತೇ ದುಷ್ಟಂ ತಮಾಹುರ್ಮೂಢಚೇತಸಮ್ ॥

*ಶತ್ರುವನ್ನು ಮಿತ್ರನನ್ನಾಗಿ, ಮಿತ್ರನನ್ನು ಶತ್ರುವಂತೆ ದ್ವೇಷಿಸುತ್ತಾ ಹಿಂಸಿಸುವವನೇ ಮೂರ್ಖ. ಯಾವಾಗಲೂ ಕೆಟ್ಟ ಕೆಲಸವನ್ನೇ ಮಾಡುತ್ತಾ ಸಮಾಜಕ್ಕೆ ಕೆಡಕನ್ನು ಮಾಡುವವನಿಗೆ ಮೂಢ ಎಂದು ಹೆಸರು.*

ಮೂಢರು, ಮೂರ್ಖರು, ನೀಚರು, ದುಷ್ಟರು, ಅವಿವೇಕಿಗಳು ಇವೆಲ್ಲವೂ ಪರ್ಯಾಯಪದಗಳೇ. ಇವರು ಆಲೋಚಿಸುವುದು, ಮಾಡುವುದು, ಆಡುವುದು —ಎಲ್ಲವೂ ಕೆಟ್ಟವುಗಳು. ಈ ಮೂರ್ಖರು ಕಾಯೇನ, ವಾಚಾ, ಮನಸಾ— ತ್ರಿಕರಣಗಳಿಂದಲೂ ಕೆಟ್ಟ ಕರ್ಮಗಳನ್ನೇ ಮಾಡುತ್ತಾರೆ. ಇದಕ್ಕೆ ಇಲ್ಲಿ ಮೂರು ಉದಾಹರಣೆಗಳನ್ನು ಕೊಟ್ಟಿದೆ:

೧. **ಅಮಿತ್ರಂ ಮಿತ್ರಂ ಕುರುತೇ:** ತಮ್ಮ ಶತ್ರುಗಳನ್ನೇ ಇವರು ಪ್ರೀತಿಸುತ್ತಾರೆ. ಲೋಕಕಂಟಕರಾದ ಶತ್ರುಗಳೇ ಇವರಿಗೆ ಪರಮಾಪ್ತರಾದ ಗೆಳೆಯರು. ದುಷ್ಟರು ದುಷ್ಟರನ್ನೇ ಪ್ರೀತಿಸುವುದರಲ್ಲಿ ಆಶ್ಚರ್ಯವೇನಿಲ್ಲ. ಈ ಮೂರ್ಖರು ಆ ಶತ್ರುಗಳ ಮಾತುಗಳನ್ನೇ ಕೇಳುತ್ತಾರೆ, ಶತ್ರುಗಳನ್ನೇ ಅತ್ಯಂತ ಪ್ರಿಯಮಿತ್ರರಂತೆ ಕಾಣುತ್ತಾರೆ.

೨. **ಮಿತ್ರಂ ದ್ವೇಷ್ಟಿ ಹಿನಸ್ತಿ ಚ:** ದುಷ್ಟರು ಮಿತ್ರರನ್ನು ದ್ವೇಷಿಸುತ್ತಾರೆ ಮತ್ತು ಹಿಂಸಿಸುತ್ತಾರೆ. ಯಾರು ಇವರಿಗೆ ನಿಜವಾಗಿ ಮಿತ್ರರೋ, ಒಳ್ಳೆಯವರೋ ಅಂಥವರನ್ನು ಮೂಢರು ದ್ವೇಷಿಸುತ್ತಾರೆ, ದೂರಮಾಡುತ್ತಾರೆ, ಇವರ ಹಿತವಾದ ಮಾತುಗಳನ್ನು ಕೇಳುವುದಿಲ್ಲ ; ಈ ಮಿತ್ರರು ಏನೇ ಒಳ್ಳೆಯ ದನ್ನು ಹೇಳಿದರೂ ಅದನ್ನು ತಪ್ಪಾಗಿಯೇ ತಿಳಿದುಕೊಳ್ಳುತ್ತಾರೆ. ಇದಲ್ಲವೇ ಮೂರ್ಖರ ಲಕ್ಷಣವೆಂದರೆ? ಮೂರ್ಖರೆಂದರೆ ಮೂರ್ಖರೇ ಎಂದರ್ಥ.

೩. **ದುಷ್ಟಂ ಕರ್ಮ ಆರಭತೇ:** ಮೂರ್ಖನು ಕೆಟ್ಟಕೆಲಸವನ್ನೇ ಪ್ರಾರಂಭಿಸು ತ್ತಾನೆ. ಹೇಗೆ ಕಳ್ಳತನ ಮಾಡಬೇಕು? ಹೇಗೆ ಇವನನ್ನು ಹಾಳುಮಾಡ ಬೇಕು? ಹೇಗೆ ಸುಳ್ಳು ಹೇಳಿದರೂ ತಪ್ಪಿಸಿಕೊಳ್ಳಬೇಕು? ಇತರರ ಸ್ವತ್ತನ್ನು ತಾನು ಹೇಗೆ ಕಬಳಿಸಬೇಕು? ಇದೇ ರೀತಿಯ ಆಲೋಚನೆಗಳನ್ನೂ ಕಾರ್ಯಗಳನ್ನೂ ಮಾಡುವುದೇ ಮೂಢನ ಜೀವನ! ಮೂರ್ಖನ ಮನಸ್ಸಿನಲ್ಲಿ ಪರೋಪಕಾರಬುದ್ಧಿಯು ಕನಸಿನಲ್ಲಿಯೂ ಬರಲಾರದು!

**ಮನುಷ್ಯನು ವಿವೇಚನೆಯಿಂದ ಸಾತ್ತ್ವಿಕಜೀವನವನ್ನು ನಡೆಸಬೇಕು**

## 22. ಎಲ್ಲರಿಂದಲೂ ಗುಣಗಳನ್ನು ಸ್ವೀಕರಿಸಬೇಕು

**ಅತ್ಯುನ್ಮತ್ತಾತ್ ಪ್ರಲಪತೋ ಬಾಲಾಚ್ಚ ಪರಿಜಲ್ಪತಃ।**
**ಸರ್ವತಃ ಸಾರಮಾದದ್ಯಾತ್ ಅಶ್ಮಭ್ಯ ಇವ ಕಾಂಚನಮ್॥**

*ಅಸಂಗತವಾಗಿ ಏನೇನನ್ನೋ ಮಾತಾಡುತ್ತಿರುವ ಉನ್ಮತ್ತನಿಂದಲೂ, ತೊದಲು ಮಾತನಾಡುವ ಬಾಲಕನಿಂದಲೂ ಸಾರವಾದುದನ್ನು ಬುದ್ಧಿವಂತನು ಸ್ವೀಕರಿಸಬೇಕು. ಕಲ್ಲುಗಳಿಂದ ಬಂಗಾರವನ್ನು ಆರಿಸಿಕೊಳ್ಳುವಂತೆ ವಿವೇಕಿಮಾನವನು ಎಲ್ಲರಿಂದಲೂ ಸಾರವನ್ನು ಗ್ರಹಿಸಬೇಕು.*

**ಪ್ರಲಪತಃ ಅತಿಉನ್ಮತ್ತಾದಪಿ ಸಾರಮಾದದ್ಯಾತ್:** ಹುಚ್ಚನ ಮಾತುಗಳಿಂದಲೂ ಉತ್ತಮವಿಷಯಗಳನ್ನು ಸ್ವೀಕರಿಸಬೇಕು. ಅವನು ಹೆಂಡಕುಡಿದ ಉನ್ಮತ್ತನೇ ಆಗಿರಬಹುದು. ಅವನಿಗೆ ಸರಿಯಾದ ಪ್ರಜ್ಞೆಯಾಗಲೀ, ಶುದ್ಧವಾದ ಆಚಾರವಿಚಾರವ್ಯವಹಾರನಡತೆಗಳಾಗಲೀ ಇಲ್ಲದಿರಬಹುದು. ದಿಟ, ಆದರೂ ಅವನ ಮಾತಿನಲ್ಲೇನಾದರೂ ಗ್ರಾಹ್ಯ ಅಂಶಗಳಿದ್ದರೆ, ಅದನ್ನು ನಾವು ಸ್ವೀಕರಿಸಲೇಬೇಕು. ಉದಾಹರಣೆಗೆ: ಆ ಕಡೆಯಿಂದ ಬರುತ್ತಿರುವ ಹುಚ್ಚನು, ಅಲ್ಲಿ ನಾಗರ ಹಾವು ಇದೆ, ಅಲ್ಲಿಗೆ ಹೋಗಬೇಡ ಕಣೋ ಎಂದು ಹೇಳಿದರೆ, ಅದು ಸತ್ಯವಾಗಿದ್ದರೆ ಆ ಕಡೆಗೆ ಹೋಗಬಾರದು.

**ಪರಿಜಲ್ಪತಃ ಬಾಲಾತ್ ಸಾರಮಾದದ್ಯಾತ್:** ಒಬ್ಬ ಐದು ವರ್ಷದ ಹುಡುಗ. ಅವನು 'ತಾತ, ಅಲ್ಲಿ ಮುಳ್ಳಿದೆ, ಹೋಗಬೇಡಿ' ಎಂದು ಹೇಳಿದಾಗ, ಅಲ್ಲಿ ಮುಳ್ಳುಗಳು ಇವೆ ಎಂದಾದರೆ ಅಲ್ಲಿಗೆ ಹೋಗಲೇಬಾರದು. ಹೀಗೆ ಸತ್ಯಾಂಶಗಳಿದ್ದರೆ ಅಂಥ ಮಾತುಗಳನ್ನು ಯಾರೇ ಹೇಳಿದರೂ ಅದನ್ನು ನಾವು ಕೇಳಲೇಬೇಕು. ವಯಸ್ಸಾದವರು ಚಿಕ್ಕ ಮಕ್ಕಳ ಮಾತುಗಳನ್ನು ಕೇಳಬಾರದೆಂದಾಗಲೀ, ಬುದ್ಧಿವಂತರು ಹುಚ್ಚರ ಮಾತುಗಳನ್ನು ಕೇಳಲೇಬಾರದೆಂದಾಗಲೀ ತಿಳಿಯಬಾರದು.

ಮತ್ತೇನೆಂದರೆ, ಆ ಮಾತುಗಳಲ್ಲಿ ಏನಾದರೂ ಸತ್ಯಾಂಶಗಳು ಇವೆಯೇ? ಗ್ರಾಹ್ಯವಾದ ಸಾರಾಂಶವೇನಾದರೂ ಇದೆಯೇ? ಎಂಬುದನ್ನು ನೋಡಬೇಕು. ಆಮೇಲೆ ಅದನ್ನು ಸ್ವೀಕರಿಸಬೇಕು. **ಸರ್ವತಃ ಸಾರಮಾದದ್ಯಾತ್:** ಎಲ್ಲರಿಂದಲೂ ಎಲ್ಲಾ ಮಾತುಗಳಿಂದಲೂ ಸಾರವನ್ನು ಮಾನವನು ಗ್ರಹಿಸಲೇಬೇಕು. ಏಕೆಂದರೆ ಯಾರುಯಾರ ಅಂದರೆ ಬಾಲಕರ ಅಥವಾ ಹುಚ್ಚರ ಮಾತುಗಳಲ್ಲಿಯೂ ಏನು ಬೇಕಾದರೂ ಗ್ರಾಹ್ಯಾಂಶಗಳಿರಬಹುದಲ್ಲವೇ?

**ಸಾರವನ್ನು, ಗುಣವನ್ನು ಎಲ್ಲರಿಂದಲೂ ನಾವು ಗ್ರಹಿಸಬೇಕು**

## 23. ಮೂರು ಮದಗಳೂ, ದಮಗಳೂ

ವಿದ್ಯಾಮದೋ ಧನಮದಃ ತೃತೀಯೋಽಭಿಜನೋ ಮದಃ।
ಮದಾ ಏತೇಽವಲಿಪ್ತಾನಾಮೇತೇ ಏವ ಸತಾಂ ದಮಾಃ॥

*ವಿದ್ಯಾಮದ, ಧನಮದ ಮತ್ತು ಸತ್ಕುಲದ ಮದ—ಎಂದು ಮೂರು ಮದಗಳಿವೆ. ದುರಹಂಕಾರಿಗಳಿಗೆ ಈ ಮದಗಳೇ ಗರ್ವಕ್ಕೆ ಕಾರಣವಾಗಿರುತ್ತವೆ. ಆದರೆ ಸತ್ಪುರುಷರಿಗೆ ಈ ಮೂರೂ ಗುಣಗಳು ಇಂದ್ರಿಯನಿಗ್ರಹಕ್ಕೆ ಕಾರಣವಾಗುತ್ತವೆ.*

ಕೆಲವು ಸತ್ಸಂಪತ್ತುಗಳು ದುಷ್ಟರಿಗೆ ಮದಕ್ಕೆ ಕಾರಣವಾದರೆ, ಅವುಗಳೇ ಸತ್ಪುರುಷರಿಗೆ ದಮಕ್ಕೆ ಕಾರಣಗಳು. ದೈವದತ್ತವಾದ ಕೆಲವು ಸಂಪತ್ತುಗಳನ್ನು ಕೆಲವರು ಮಾನವರು ಹೊಂದಿರುತ್ತಾರೆ. ಇವುಗಳು ಎಲ್ಲರಿಗೂ ದಕ್ಕಿರುವುದಿಲ್ಲ ; ಕೆಲವರಿಗೆ ಮಾತ್ರವೇ ಇರುವಂಥವುಗಳು. ಉದಾಹರಣೆಗೆ: ವಿದ್ಯಾ, ಬುದ್ಧಿ, ವಾಕ್ಚಾತುರ್ಯ, ಧನ, ಅಧಿಕಾರ, ಸೌಂದರ್ಯ, ಸತ್ಕುಲದಲ್ಲಿ ಜನ್ಮ ಇತ್ಯಾದಿಗಳು. ಸ್ವಪ್ರಯತ್ನದಿಂದಲೂ ಈಶ್ವರಾನುಗ್ರಹದಿಂದಲೂ ಬಂದಿರುವ ಅಸಾಧಾರಣವಾದ ಕಲೆ, ಸಂಪತ್ತುಗಳಿವು. ಇಂಥ ಸಂಪತ್ತುಗಳಿದ್ದಾಗ ದುಷ್ಟರಿಗೆ ಇವುಗಳಿಂದ ಗರ್ವವುಂಟಾಗುತ್ತದೆ. ಆಗ ಆ ವಿದ್ಯೆಯು ವಿದ್ಯಾಮದವೆನಿಸುತ್ತದೆ, ಧನದಿಂದ ಧನಮದವು ಬರುತ್ತದೆ, ಅಧಿಕಾರದಿಂದ ಅಧಿಕಾರಮದವೇ ಉಂಟಾಗಿಬಿಡುತ್ತದೆ. ಇಂಥ ಮದಗಳಿಂದ ದುರಹಂಕಾರಿಗಳಿಗೆ, ಅಜ್ಞರಾದ ಮೂರ್ಖರಿಗೆ ಇನ್ನೂ ಹೆಚ್ಚಿನ ಗರ್ವ, ಮದಗಳೇ ಜಾಸ್ತಿಯಾಗುತ್ತವೆ. ವಿದ್ಯೆಯು ವಿದ್ಯಾಮದವನ್ನೂ, ಧನವು ಧನಮದವನ್ನೂ, ಅಧಿಕಾರವು ಅಧಿಕಾರಮದವನ್ನೂ ಮೂರ್ಖರಲ್ಲಿ ಉಂಟುಮಾಡುತ್ತವೆ. ಇವು ಮೂರೂ ಮೂರ್ಖರ ಹಣೆಬರಹ.

ಆದರೆ, **ಏತೇ ಏವ ಸತಾಂ ದಮಾಃ.** ಸತ್ಪುರುಷರಿಗೆ ಮಾತ್ರ ಈ ವಿದ್ಯಾ, ಧನ, ಅಧಿಕಾರ, ಸತ್ಕುಲಪ್ರಸೂತಿಗಳು ದಮಕ್ಕೇ ಕಾರಣವಾಗುತ್ತವೆ. ದಮ ಎಂದರೆ ಶಾಂತರಾಗಿರುವುದು. ಇಷ್ಟೊಂದು ಅಸಾಧಾರಣವಾದ ಸಂಪತ್ತುಗಳು ಇದ್ದರೂ ಸತ್ಪುರುಷರು ಮಾತ್ರ ಏನನ್ನೂ ತೋರಿಸಿಕೊಳ್ಳದೇ, ನಿರಾಡಂಬರರಾಗಿ ಶಾಂತರಾಗಿಯೇ ಇರುತ್ತಾರೆ. ವಿಶೇಷವಾದ ವಿದ್ಯೆ, ಅಧಿಕವಾದ ಹಣ, ಎತ್ತರದ ಅಧಿಕಾರವಿಲ್ಲದಿರುವಾಗ ಶಾಂತರಾಗಿರುವುದರಲ್ಲಿ ವಿಶೇಷವೇನಿಲ್ಲ. ಆದರೆ ಈ ಅದ್ಭುತಸಂಪತ್ತುಗಳಿದ್ದರೂ, ಅವುಗಳನ್ನು ತೋರಿಸಿಕೊಳ್ಳದೇ ಈ ಸಂಪತ್ತುಗಳಿಂದ ಗರ್ವಿಷ್ಠರಾಗದೇ ಸತ್ಪುರುಷರುಗಳು ಶಾಂತರಾಗಿರುತ್ತಾರಲ್ಲ, ಅದೇ ಪ್ರಾಜ್ಞರ, ಸತ್ಪುರುಷರ, ಮಹಾತ್ಮರ, ಜ್ಞಾನಿಗಳ ಹಿರಿಮೆಯು.

**ಹೆಚ್ಚಿನ ವಿದ್ಯಾ, ಧನ, ಅಧಿಕಾರಗಳಿಂದ ಮಾನವರು ಗರ್ವಿಷ್ಠರಾಗಬಾರದು**

# 24. ಇವನೇ ಪಂಡಿತನು

**ಯಸ್ಯ ಕೃತ್ಯಂ ನ ಜಾನಂತಿ ಮಂತ್ರಂ ವಾ ಮಂತ್ರಿತಂ ಪರೇ।**
**ಕೃತಮೇವಾಸ್ಯ ಜಾನಂತಿ ಸ ವೈ ಪಂಡಿತ ಉಚ್ಯತೇ॥**

*ಯಾವನ ಉದ್ದೇಶಿತ ಕಾರ್ಯವನ್ನಾಗಲೀ, ಅದನ್ನು ಸಾಧಿಸುವುದಕ್ಕಾಗಿ ಮಾಡುತ್ತಿರುವ ಮಂತ್ರಾಲೋಚನದ ಉಪಾಯವನ್ನಾಗಲೀ, ಇತರರು ತಿಳಿಯಲಾರರೋ; ಯಾವನ ಉದ್ದೇಶವನ್ನು, ಅವನು ಮಾಡಿದ ಮೇಲೆಯೇ ಇತರರು ತಿಳಿಯುತ್ತಾರೆಯೋ, ಅವನನ್ನೇ 'ಪಂಡಿತ' ಎಂದು ವಿವೇಕಿಗಳು ಕರೆಯುತ್ತಾರೆ.*

ಪ್ರತಿಯೊಬ್ಬ ಉದ್ಯೋಗೀ ಮನುಷ್ಯನು, ಏನಾದರೊಂದು ದೊಡ್ಡಗುರಿಯನ್ನು ತನ್ನ ಮನಸ್ಸಿನಲ್ಲಿ ಇಟ್ಟುಕೊಂಡೇ ಇರುತ್ತಾನೆ. ಆ ಉದ್ದೇಶಿತ ಕಾರ್ಯಗಳು ಭಿನ್ನಭಿನ್ನವಾಗಿರುತ್ತವೆ. ಉದಾ: ನಾನು ದೊಡ್ಡ ಕಾರನ್ನು ಕೊಂಡುಕೊಳ್ಳಬೇಕು, ನಾನು ದೊಡ್ಡ ಮನೆಯನ್ನು ಕಟ್ಟಬೇಕು, ನಾನು ಬೃಹದ್‌ಗ್ರಂಥವನ್ನು ಬರೆಯಬೇಕು, ನಾನು ದೊಡ್ಡ ಉದ್ಯಮಿಯಾಗಬೇಕು—ಇತ್ಯಾದಿ ಇತ್ಯಾದಿ. ಈ ಉದ್ದೇಶವನ್ನು ಮೊದಲೇ ತಿಳಿಸುವವನು ದಡ್ಡ ; ಇದನ್ನು ಇತರರಿಗೆ ಈಗಲೇ ತಿಳಿಸದೇ, ಆ ಗುರಿಸಾಧನೆಗಾಗಿ ಶ್ರಮಪಡುತ್ತಿರುವವನೇ ಪಂಡಿತ.

ಅನಂತರ, ತನ್ನ ಆ ಉದ್ದೇಶಿತ ಕಾರ್ಯಸಾಧನೆಗಾಗಿ ಅವನು ಅನೇಕ ಆಲೋಚನೆಗಳನ್ನು ಮಾಡುತ್ತಾ ಇರುತ್ತಾನೆ. ಇದಕ್ಕೇ ಮಂತ್ರಾಲೋಚನೆ ಎಂದು ಹೆಸರು. ಈ ಗುಟ್ಟನ್ನು ಇತರರಿಗೆ ಈಗಲೇ ಹೇಳಬಾರದು. ಇತರರಿಗೆ ಈ ಮಂತ್ರಾಲೋಚನೆಗಳು ತಿಳಿಯದಂತೆ ರಹಸ್ಯವಾಗಿ ಮಾಡುವವನೇ ಪಂಡಿತನು. ಇತರರಿಗೇನಾದರೂ ಮೊದಲೇ ಈ ಮಂತ್ರಾಲೋಚನೆಗಳು ತಿಳಿದುಬಿಟ್ಟರೆ ಅವರು ಅಡ್ಡಿಮಾಡಬಹುದಲ್ಲವೇ? ಆದ್ದರಿಂದ ಯಾರಿಗೂ ತಿಳಿಯದಂತೆ ರಹಸ್ಯವಾಗಿ ಎಚ್ಚರಿಕೆಯಿಂದ ಮಂತ್ರಾಲೋಚನೆಯನ್ನು ಮಾಡುತ್ತಿರಬೇಕು.

ಮಂತ್ರಾಲೋಚನೆಯ ಜೊತೆಜೊತೆಯಲ್ಲಿಯೇ ಕಾರ್ಯಸಾಧನವಿಧಾನವನ್ನೂ ಆ ವಿವೇಕಿಯು ಮಾಡುತ್ತಾ ಇರುತ್ತಾನೆ. ಈ ಕಾರ್ಯವಿಧಾನವನ್ನೂ ಯಾರಿಗೂ ತಿಳಿಯದಂತೆ ಉಪಾಯದಿಂದ ಮಾಡುವವನೇ ಪಂಡಿತನು. ತನ್ನ ಉದ್ದೇಶಿತ ಗುರಿಯು ಅಂದರೆ ಕಾರ್ಯವು ಫಲವನ್ನು ಕೊಟ್ಟಮೇಲೆಯೇ ಇತರರಿಗೆ ಆಶ್ಚರ್ಯವಾಗುವಂತೆ ಎಲ್ಲವೂ ತಾನೇ ತಿಳಿಯುತ್ತದೆ. ಫಲಗಳನ್ನು ನೋಡಿಕೊಂಡು ಇತರರು ಇವನ ಹಿಂದಿನ ಆ ತಪಸ್ಸನ್ನೆಲ್ಲ ಊಹೆಮಾಡುವಂತೆ ಮಾಡುವವನೇ ಪಂಡಿತ! ಇದನ್ನೇ **"ಫಲಾನುಮೇಯಾಃ ಪ್ರಾರಂಭಾಃ"** ಎಂದಿದ್ದಾನೆ ಕವಿರತ್ನ ಕಾಳಿದಾಸ!

**ಬುದ್ಧಿವಂತನು ತನ್ನ ಉದ್ದೇಶಿತ ಗುರಿಯನ್ನು ಮೊದಲೇ ಪ್ರಕಟಿಸಬಾರದು**

## 25. ಈ ಐವರನ್ನು ಪೂಜಿಸಬೇಕು

**ಪಂಚೈವ ಪೂಜಯನ್ ಲೋಕೇ ಯಶಃ ಪ್ರಾಪ್ನೋತಿ ಕೇವಲಮ್ ।**
**ದೇವಾನ್ ಪಿತೄನ್ ಮನುಷ್ಯಾಂಶ್ಚ ಭಿಕ್ಷೂನತಿಥಿಪಂಚಮಾನ್ ॥**

*ದೇವತೆಗಳನ್ನೂ, ಪಿತೃಗಳನ್ನೂ, ಮನುಷ್ಯರನ್ನೂ, ಯತಿಗಳನ್ನೂ ಮತ್ತು ಅತಿಥಿಗಳನ್ನೂ ಪೂಜಿಸುವ ಮನುಷ್ಯನು ಶುದ್ಧವಾದ ಕೀರ್ತಿಯನ್ನು ಹೊಂದುತ್ತಾನೆ.*

ಈ ಐವರನ್ನು ಪೂಜಿಸುವವನು ಲೋಕದಲ್ಲಿ ಕೀರ್ತಿವಂತನಾಗುತ್ತಾನೆ:

೧. **ದೇವಾನ್:** ದೇವತೆಗಳನ್ನು ಪೂಜಿಸುವವನು ಕೀರ್ತಿವಂತನಾಗುತ್ತಾನೆ. ಗೃಹಸ್ಥನು ಪ್ರತಿದಿನವೂ ದೇವತಾರಾಧನೆಯನ್ನು ಮಾಡುತ್ತಿದ್ದರೆ, ಆದರಿಂದ ಆಯುರಾರೋಗ್ಯಾದಿ ಸಕಲಸಂಪತ್ತುಗಳನ್ನೂ ಹೊಂದುತ್ತಾನೆ, ಕೀರ್ತಿವಂತನೂ ಆಗುತ್ತಾನೆ. ನವಗ್ರಹಾರಾಧನೆ, ಶಿವಾರಾಧನೆ, ಗಣೇಶಾರಾಧನೆಯಿಂದ ಸಕಲ ಮಾನವರಿಗೂ ಇಷ್ಟಾರ್ಥಗಳು ಸಿದ್ಧಿಸುತ್ತವೆ.

೨. **ಪಿತೄನ್:** ಅಧಿಕಾರಿಗಳು ಪಿತೃದೇವತೆಗಳನ್ನು ಪೂಜಿಸಬೇಕು. ಪಿತೃಶ್ರಾದ್ಧ, ಪಿತೃತರ್ಪಣ, ಪಿತೃಯಜ್ಞಾದಿಗಳನ್ನು ಅವಶ್ಯವಾಗಿ ಮಾಡಬೇಕು.

೩. **ಮನುಷ್ಯಾನ್:** ಮನುಷ್ಯರನ್ನೂ ಪೂಜಿಸಬೇಕು, ಗೌರವಿಸಬೇಕು. ಯಾರನ್ನೂ ದ್ವೇಷಿಸದೇ ಎಲ್ಲರನ್ನೂ ಸಂತೋಷಪಡಿಸುವುದು ಒಳ್ಳೆಯ ಸ್ವಭಾವ. ಇದರಿಂದ ಯಶಸ್ಸು ಲಭಿಸುತ್ತದೆ.

೪. **ಭಿಕ್ಷೂನ್:** ಭಿಕ್ಷುಗಳೆಂದರೆ ಸಂನ್ಯಾಸಿಗಳು. ಸಂನ್ಯಾಸಿಗಳೆಂದರೆ ಮಹಾತ್ಮರು, ತಪಸ್ವಿಗಳು, ತ್ಯಾಗಮೂರ್ತಿಗಳು. ಸರ್ವಾತ್ಮಭಾವಸಂಪನ್ನರಾದ ಸಂನ್ಯಾಸಿಗಳನ್ನು ಪೂಜಿಸುವುದರಿಂದ ಈಶ್ವರನನ್ನೇ ಪೂಜಿಸಿದಂತಾಗುತ್ತದೆ. ಸರ್ವಸಂಗಪರಿತ್ಯಾಗಿಗಳಾದ ಸಂನ್ಯಾಸಿಗಳನ್ನು ದರ್ಶನಮಾಡುವುದೇ ಪುಣ್ಯ. ಇನ್ನು ಇವರನ್ನು ಪೂಜಿಸುವುದರಿಂದ ಮಹಾಪುಣ್ಯವೇ ಲಭಿಸುತ್ತದೆ.

೫. **ಅತಿಥಿಪಂಚಮಾನ್:** ಅತಿಥಿಗಳನ್ನು ಪೂಜಿಸಬೇಕು. ಕರೆಯದೇ ಇದ್ದರೂ ತಾವೇತಾವಾಗಿ ಮನೆಗೆ ಬಂದಂಥ ಮಹಾತ್ಮರೇ ಅತಿಥಿಗಳು. ಭೋಜನ ಸಮಯದಲ್ಲಿ ಮನೆಗೆ ಬಂದಂಥ ಅತಿಥಿಅಭ್ಯಾಗತರನ್ನು ಸತ್ಕರಿಸಬೇಕು.

**ಅಭ್ಯಾಗತಃ ಸ್ವಯಂ ವಿಷ್ಣುಃ** ಎಂಬುದು ನಮ್ಮ ಸನಾತನ ಸಂಸ್ಕೃತಿಯಲ್ಲವೇ? ಹೀಗೆ ಈ ಮೇಲಿನ ಐದೂ ಮಹಾತ್ಮರುಗಳನ್ನು ಪ್ರೀತಿಯಿಂದ ಪೂಜಿಸುವವನಿಗೆ ಯಶಸ್ಸು, ಆಯುಷ್ಯ, ಆರೋಗ್ಯಾದಿಭಾಗ್ಯಗಳುಂಟಾಗುತ್ತವೆ.

**ಮನುಷ್ಯರು ಅತಿಥಿಸಂನ್ಯಾಸಿಗಳನ್ನು ಪೂಜಿಸಬೇಕು**

## 26. ಈ ಆರೂ ಜನಗಳಿಗೆ ನಿತ್ಯದುಃಖ

**ಈರ್ಷ್ಯೀ ಘೃಣೀ ನ ಸಂತುಷ್ಟಃ ಕ್ರೋಧನೋ ನಿತ್ಯಶಂಕಿತಃ।**
**ಪರಭಾಗ್ಯೋಪಜೀವೀ ಚ ಷಡೇತೇ ನಿತ್ಯದುಃಖಿತಾಃ॥**

*ಅಸೂಯಾ ಉಳ್ಳವನು, ದುರಾಶೆಯುಳ್ಳವನು, ತೃಪ್ತಿಯಿಲ್ಲದವನು, ತುಂಬಾ ಕೋಪವುಳ್ಳವನು, ಸಂಶಯ ಉಳ್ಳವನು ಮತ್ತು ಬೇರೊಬ್ಬರ ಸಂಪತ್ತಿನಿಂದಲೇ ಬದುಕಿರುವವನು—ಈ ಆರೂ ಜನಗಳಿಗೆ ಯಾವಾಗಲೂ ನಿತ್ಯದುಃಖವಿರುತ್ತದೆ.*

ಈ ಕೆಳಗಿನ ಆರೂ ಜನಗಳು ನಿತ್ಯದುಃಖಿಗಳಾಗಿರುತ್ತಾರೆ:

೧. **ಈರ್ಷ್ಯೀ:** ಈರ್ಷೆಯುಳ್ಳವನು ಈರ್ಷ್ಯೀ. ಈರ್ಷೆ ಎಂದರೆ ಹೊಟ್ಟೆಕಿಚ್ಚು. ಇದಕ್ಕೆ ಅಸೂಯಾ ಎಂದೂ ಹೆಸರು. ಅಸೂಯೆಯುಳ್ಳವನು ಯಾವಾಗಲೂ ಇತರರ ಸಂಪತ್ತನ್ನು ನೋಡುತ್ತಾ, ಅದು ತನಗಿಲ್ಲವಲ್ಲ ಎಂದು ದುಃಖಿಯಾಗಿರುತ್ತಾನೆ. ಅಸೂಯೆಯು ಒಳ್ಳೆಯ ಗುಣವಲ್ಲ.

೨. **ಘೃಣೀ:** ಘೃಣಾ ಎಂದರೆ ದುರಾಶೆ, ಅತ್ಯಾಶೆ; ಇದನ್ನು ಉಳ್ಳವನಿಗೇ ಘೃಣೀ ಎಂದು ಹೆಸರು. ಎಷ್ಟಿದ್ದರೂ ಇನ್ನೂ ಬೇಕು, ಅದೂ ಬೇಕು, ಇದೂ ಬೇಕು ಎಂದು ಬಯಸುವವನಿಗೆ ಸುಖವೆಲ್ಲಿಂದ ಬರಬೇಕು?

೩. **ಅಸಂತುಷ್ಟಃ:** ತೃಪ್ತಿಯಿಲ್ಲದವನೂ ದುಃಖಿಯಾಗಿರುತ್ತಾನೆ. ತೃಪ್ತಿಯಿಲ್ಲದವನಿಗೆ ದುಃಖಗಳೇ ಹೊರತು ಎಂದಿಗೂ ಸುಖವು ಇರುವುದಿಲ್ಲ. ನಿತ್ಯ ಸಂತೃಪ್ತಿಯಿಂದ ಮಾತ್ರವೇ ಸುಖ-ಶಾಂತಿ ಆನಂದಗಳು ಉಂಟಾಗುತ್ತವೆ.

೪. **ಕ್ರೋಧನಃ:** ಕೋಪಿಷ್ಠನಿಗೂ ನಿತ್ಯದುಃಖಗಳೇ ಹೊರತು ಸುಖವಿರುವುದಿಲ್ಲ. ಆದ್ದರಿಂದ ವಿವೇಕಿಯು ಸಣ್ಣ ಸಣ್ಣ ವಿಷಯಗಳಿಗೆ ತುಂಬಾ ಕೋಪವನ್ನು ವೃಥಾ ಮಾಡಿಕೊಳ್ಳಬಾರದು.

೫. **ನಿತ್ಯಶಂಕಿತಃ:** ಪ್ರತಿಯೊಂದು ವಿಷಯದಲ್ಲಿಯೂ ಸಂಶಯಪಡುವವರಿಗೆ ಯಾವಾಗಲೂ ದುಃಖವೇ ಹೊರತು ಶಾಂತಿಯಿರುವುದಿಲ್ಲ. ಯಾರನ್ನೂ ನಂಬದಿರುವವನಿಗೆ ಸುಖಶಾಂತಿಗಳು ಹೇಗೆತಾನೇ ಬರುತ್ತವೆ?

೬. **ಪರಭಾಗ್ಯೋಪಜೀವೀ ನಿತ್ಯದುಃಖೀ:** ಬೇರೆಯವರ ಸಂಪತ್ತುಗಳಿಂದಲೇ ಬದುಕಿರುವವನಿಗೂ ದುಃಖಗಳಿರುತ್ತವೆ. ಬಾಡಿಗೆಯ ಮನೆ, ಟ್ಯಾಕ್ಸಿ ವಾಹನಗಳು, ಶ್ರೀಮಂತರ ಮನೆಯಲ್ಲಿ ಕೆಲಸಮಾಡುವುದು, ಇವುಗಳಿಂದ ದುಃಖವೇ ಹೊರತು ಶಾಂತಿಯಿರುವುದಿಲ್ಲ.

**ಮನುಷ್ಯನು ದುರಾಶೆಗಳನ್ನೂ ಕೋಪವನ್ನೂ ಬಿಟ್ಟುಬಿಡಬೇಕು**

# 27. ಅದ್ಭುತವಾದ ಮನೆಯಿದು

ನವದ್ವಾರಮಿದಂ ವೇಶ್ಮ ತ್ರಿಸ್ಥೂಣಂ ಪಂಚಸಾಕ್ಷಿಕಮ್ ।
ಕ್ಷೇತ್ರಜ್ಞಾಧಿಷ್ಠಿತಂ ವಿದ್ವಾನ್ ಯೋ ವೇದ ಸ ಪರಃ ಕವಿಃ ॥

*ಶರೀರವೆಂಬ ಈ ಮನೆಯು ಅದ್ಭುತವಾಗಿದೆ! ಇದಕ್ಕೆ ಒಂಭತ್ತು ದ್ವಾರಗಳೂ, ಮೂರು ಕಂಬಗಳೂ, ಐದು ಸಾಕ್ಷಿಗಳೂ ಇದ್ದಾರೆ. ಇದು ಜೀವಾತ್ಮನಿಗೆ ವಾಸಸ್ಥಾನ ವಾಗಿರುತ್ತದೆ. ಹೀಗೆಂದು ಅರಿತವನೇ ಜ್ಞಾನಿಯು.*

ದೇಹವೆಂಬ ಮನೆಯ ಮಹಿಮೆಯನ್ನು ಇಲ್ಲಿ ಹೇಳಿದೆ:

೧. **ಇದಂ ವೇಶ್ಮ ನವದ್ವಾರಮ್:** ಈ ಶರೀರವೆಂಬ ಮನೆಗೆ ಒಂಭತ್ತು ದ್ವಾರಗಳು: ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗಿನ ಹೊಳ್ಳೆಗಳು, ಒಂದು ಬಾಯಿ, ಒಂದು ಪಾಯು, ಒಂದು ಉಪಸ್ಥ. ಹೀಗೆ ಈ ಶರೀರಗೃಹಕ್ಕೆ ಒಂಭತ್ತು ಬಾಗಿಲುಗಳಿವೆ. ಇಂಥ ದೇಹವು ಜೀವಾತ್ಮನಿಗೆ ಎಷ್ಟು ಸುಂದರವಾದ ವಾಸಸ್ಥಾನವಾಗಿರುತ್ತದೆ!

೨. **ಇದಂ ವೇಶ್ಮ ತ್ರಿಸ್ಥೂಣಮ್:** ಈ ದೇಹಗೃಹಕ್ಕೆ ಮೂರು ಕಂಬ ಗಳಿರುತ್ತವೆ. ಅವುಗಳೇ ಕಫ, ಪಿತ್ತ ಮತ್ತು ವಾತಗಳು. ಕಫ, ಪಿತ್ತ, ವಾತಗಳಿರುವುದರಿಂದಲೇ ಈ ಶರೀರವೆಂಬ ಗೃಹವು ಗಟ್ಟಿಯಾಗಿರುತ್ತದೆ.

೩. **ಇದಂ ವೇಶ್ಮ ಪಂಚಸಾಕ್ಷಿಕಮ್:** ಈ ದೇಹಗೃಹಕ್ಕೆ ಐದು ಸಾಕ್ಷಿಗಳಿದ್ದಾರೆ. ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆಗಳೆಂಬ ಐದು ಸಾಕ್ಷಿಗಳು ಈ ದೇಹದೊಳಗೆ ಇದ್ದಾರೆ. ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನಗಳೆಂಬ ಪಂಚಪ್ರಾಣಗಳೂ ಇಲ್ಲಿ ವಾಸಮಾಡುತ್ತವೆ. ಇನ್ನು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ ಮಯರೆಂಬ ಐದು ಆತ್ಮರು ಈ ದೇಹಗೃಹದಲ್ಲಿ ಸಾಕ್ಷಿಯಾಗಿರುತ್ತಾರೆ.

೪. **ಇದಂ ವೇಶ್ಮ ಕ್ಷೇತ್ರಜ್ಞಸ್ಯ ಅಧಿಷ್ಠಿತಮ್:** ಈ ಮನೆಯು ಜೀವಾತ್ಮನಿಗೆ ವಾಸಸ್ಥಾನವಾಗಿರುತ್ತದೆ. ಜೀವಾತ್ಮನಿಗೋಸ್ಕರವೇ ಈ ಶರೀರವೆಂಬ ಗೃಹವು ಭಗವಂತನಿಂದ ನಿರ್ಮಾಣಗೊಂಡಿದೆ. ಜೀವಾತ್ಮನೇ ಈ ಶರೀರದ ಒಡೆಯನು. ಗೃಹವು ಎಷ್ಟೇ ಸುಂದರವಾಗಿದ್ದರೂ ಗೃಹವೇ ಯಜಮಾನ ನಲ್ಲ, ಹೀಗೆಯೇ ಆತ್ಮನು ದೇಹಕ್ಕೆ ಸ್ವಾಮಿಯೇ ಹೊರತು ದೇಹವೇ ಆತ್ಮನಲ್ಲ, ಆತ್ಮನು ದೇಹವೂ ಅಲ್ಲ ; ಹೀಗೆ ತಿಳಿದವನೇ ಜ್ಞಾನಿಯು.

**ಈ ಅದ್ಭುತ ದೇಹವು ಆತ್ಮನಿಗೆ ವಾಸಸ್ಥಾನವೆಂದು ತಿಳಿಯಬೇಕು**

# 28. ಮೊದಲು ವಿಚಾರವನ್ನು ಮಾಡಬೇಕು

**ಕಿಂ ನು ಮೇ ಸ್ಯಾದಿದಂ ಕೃತ್ವಾ ಕಿಂ ನು ಮೇ ಸ್ಯಾದಕುರ್ವತಃ ।
ಇತಿ ಕರ್ಮಾಣಿ ಸಂಚಿಂತ್ಯ ಕುರ್ಯಾದ್ ವಾ ಪುರುಷೋ ನ ವಾ ॥**

***ಈ ಕೆಲಸವನ್ನು ಮಾಡಿದರೆ ಏನು ಒಳ್ಳೆಯ ಫಲವಾಗುತ್ತದೆ? ಇದನ್ನು ಮಾಡದೇ ಹೋದರೆ ಏನು ಹಾನಿಯಾಗುತ್ತದೆ? ಎಂಬುದನ್ನು ಚೆನ್ನಾಗಿ ವಿಚಾರಮಾಡಿದ ಮೇಲೆಯೇ ಮನುಷ್ಯನು ಆ ಕಾರ್ಯವನ್ನು ಮಾಡಬೇಕು ಅಥವಾ ಬಿಡಬೇಕು. ಆದರೆ, ವಿಚಾರಮಾಡದೇ ಏನನ್ನೂ ಮಾಡಲೇಬಾರದು.***

ಮನುಷ್ಯನು ವಿಚಾರಜೀವಿ, ಬುದ್ಧಿಜೀವಿ; ಇವನೇನೂ ಪಶುವಲ್ಲ, ಅಥವಾ ದಾನವನೂ ಅಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ಭಗವಂತನು ಸಾಕಷ್ಟು ಬುದ್ಧಿಯನ್ನೂ ವಿಚಾರಸಾಮರ್ಥ್ಯವನ್ನೂ ಕೊಟ್ಟಿರುತ್ತಾನೆ. ಇದನ್ನು ಮನುಷ್ಯನು ಬಳಸಿಕೊಳ್ಳಬೇಕು. ಹೇಗೆಂದರೆ, ಒಂದು ಕೆಲಸವನ್ನು ಮಾಡುವುದಕ್ಕಿಂತ ಮುಂಚೆ ಇದು ಯುಕ್ತವೇ? ಅಥವಾ ಅಯುಕ್ತವೇ? ಇದನ್ನು ಮಾಡುವುದರಿಂದ ಏನು ಒಳ್ಳೆಯ ಫಲವಾಗುತ್ತೆ? ಇದನ್ನು ಮಾಡದೇ ಹೋದರೆ ಅದರಿಂದ ನನಗಾಗುವ ನಷ್ಟವೇನು? ಎಂಬುದನ್ನು ವಿಚಾರಮಾಡಿಯೇ, ಅನಂತರ ಮನುಷ್ಯನು ಆ ಕೆಲಸವನ್ನು ಮಾಡಬೇಕು ಅಥವಾ ಕೈಬಿಡಬೇಕು. ಹಿಂದೂಮುಂದೂ ಯೋಚನೆ ಮಾಡದೇ ಯಾವ ಕೆಲಸಗಳನ್ನೂ ಮನುಷ್ಯನು ಮಾಡಲೇಬಾರದು.

ಉದಾಹರಣೆಗೆ: ಕಳ್ಳತನವನ್ನು ಮಾಡುವುದಕ್ಕಿಂತ ಮುಂಚೆ ಮಾನವನು ವಿಚಾರಮಾಡಬೇಕು. ಕಳ್ಳತನವನ್ನು ನಾನು ಮಾಡಬಹುದೇ? ಇದು ಯುಕ್ತವೇ? ನನ್ನ ವಸ್ತುವನ್ನು ಬೇರೆಯವರು ಕಳ್ಳತನಮಾಡಿದರೆ ನನಗೆ ದುಃಖವಾಗುತ್ತದೆ, ಹೀಗೆಯೇ ನಾನೂ ಮತ್ತೊಬ್ಬರ ವಸ್ತುಗಳನ್ನು ಕಳವು ಮಾಡಿದರೆ, ಅದರಿಂದ ಅವರಿಗೂ ದುಃಖವಾಗುತ್ತದೆ; ಆದ್ದರಿಂದ ಕಳ್ಳತನಮಾಡಬಾರದು, ಕಳ್ಳತನ ಮಹಾಪಾಪ ಎಂದು ವಿಚಾರಮಾಡಿದರೆ ಅವನು ಮುಂದೆ ಆ ಕಳ್ಳತನಕಾರ್ಯದಲ್ಲಿ ಮುಂದುವರಿಯುವುದಿಲ್ಲ. ಹೀಗೆಯೇ ಸುಳ್ಳು ಹೇಳುವುದು, ಮೋಸಮಾಡುವುದು ತಪ್ಪು ಎಂದು ತಿಳಿದಾಗ ಅಂಥ ಹೀನಕೃತ್ಯಗಳನ್ನು ಮಾಡುವುದೇ ಇಲ್ಲ.

ಹೀಗೆಯೇ ವಿದ್ಯೆಯನ್ನು ಗಳಿಸುವುದು, ದಾನಧರ್ಮಗಳನ್ನು ಮಾಡುವುದು, ವೇದಾಂತಗಳನ್ನು ಓದುವುದು, ಪರೋಪಕಾರ ಮಾಡುವುದು ಇವೆಲ್ಲವೂ ಸತ್ಕಾರ್ಯಗಳೆಂದು ವಿಚಾರಮಾಡಿ ತಿಳಿದರೆ, ಅಂಥ ಕಾರ್ಯಗಳಲ್ಲಿ ಮಾನವನು ತಾನೇ ಸಂತೋಷದಿಂದ ಪ್ರವೃತ್ತನಾಗುತ್ತಾನೆ.

**ವಿವೇಕಿಯು ಕೆಟ್ಟಕೆಲಸಗಳನ್ನು ಎಂದೆಂದಿಗೂ ಮಾಡಬಾರದು**

# 29. ಈ ಮೂರನ್ನೂ ಮಾಡಬಾರದು

**ಹರಣಂ ಚ ಪರಸ್ವಾನಾಂ ಪರದಾರಾಭಿಮರ್ಶನಮ್।**
**ಸುಹೃದಶ್ಚ ಪರಿತ್ಯಾಗಸ್ತ್ರಯೋ ದೋಷಾಃ ಕ್ಷಯಾವಹಾಃ॥**

*ಇನ್ನೊಬ್ಬರ ವಸ್ತುಗಳನ್ನು ಕಳ್ಳತನಮಾಡುವುದು, ಪರಸ್ತ್ರೀಯರ ಸಂಗಮಾಡುವುದು, ಸುಹೃದರನ್ನು ಕೈಬಿಡುವುದು—ಈ ಮೂರು ಪಾಪಕೃತ್ಯಗಳನ್ನು ಮಾಡಬಾರದು. ಏಕೆಂದರೆ ಇದರಿಂದ ಮನುಷ್ಯನು ಹಾಳಾಗಿಹೋಗುತ್ತಾನೆ.*

ಈ ಕೆಳಗಿನ ಮೂರು ರೀತಿಯ ಪಾಪಕೃತ್ಯಗಳನ್ನು ಬಿಡಬೇಕು:

೧. **ಪರಸ್ವಾನಾಂ ಹರಣಮ್:** ಬೇರೊಬ್ಬರ ಪದಾರ್ಥಗಳನ್ನು ಕಳವುಮಾಡುವುದು ಪಾಪ. ನಮ್ಮದಲ್ಲದ ವಸ್ತುಗಳು ಎಷ್ಟೇ ಚೆನ್ನಾಗಿದ್ದರೂ ಅವುಗಳ ಕಡೆಗೆ ನಮ್ಮ ಮನಸ್ಸು ಹೋಗಲೇಬಾರದು. ಕಳ್ಳತನವನ್ನು ಮಾಡುವಾಗ ಕಳ್ಳನ ಮನಸ್ಸಿನಲ್ಲಿ ಅಂಜಿಕೆಯು ಇರುತ್ತದೆ. ಕಳ್ಳತನಮಾಡಿದ ಕಳ್ಳನಿಗೆ ಶಾಂತಿಯಾಗಲೀ ನೆಮ್ಮದಿಯಾಗಲೀ ಇರುವುದಿಲ್ಲ. ಕಳ್ಳತನಮಾಡಲ್ಪಟ್ಟ ಆ ಪದಾರ್ಥವು ಅವನಿಗೆ ವಿಷಕ್ಕೆ ಸಮಾನವಾಗಿರುತ್ತದೆ. ಆದ್ದರಿಂದ ಮಾನವನು ಎಂದೆಂದಿಗೂ ಕಳ್ಳತನವನ್ನು ಮಾಡಲೇಬಾರದು.

೨. **ಪರದಾರಾಭಿಮರ್ಶನಮ್:** ಪರಸ್ತ್ರೀಸಂಗವನ್ನು ಮಾಡಲೇಬಾರದು. ಇತರ ಸ್ತ್ರೀಯರು ಎಷ್ಟೇ ಸುಂದರವಾಗಿದ್ದರೂ, ಎಷ್ಟೇ ಶ್ರೀಮಂತರಾಗಿದ್ದರೂ ಅಂಥವರ ಮೇಲೆ ಪುರುಷರು ಅತ್ಯಾಚಾರವನ್ನು ಮಾಡಲೇಬಾರದು. ಏಕೆಂದರೆ ಇದರಿಂದ ಆ ಸ್ತ್ರೀಯರಿಗೆ ತುಂಬಾ ದುಃಖವಾಗುತ್ತದೆ. ಪರಸ್ತ್ರೀಸಂಗವೆಂಬುದು ಮಹಾಪಾಪವೆಂದೇ ತಿಳಿಯಬೇಕು. ಪರಸ್ತ್ರೀಸಂಗದಿಂದ ಅವನ ವಂಶವೇ ನಿರ್ವಂಶವಾಗಿಬಿಡುತ್ತದೆ. ಎಚ್ಚರಿಕೆ, ಹುಷಾರ್!

೩. **ಸುಹೃದಶ್ಚ ಪರಿತ್ಯಾಗಃ:** ಸುಹೃದರನ್ನು ಕೈಬಿಡಬಾರದು. ಏಕೆಂದರೆ ಯಾವ ಪ್ರತ್ಯುಪಕಾರವನ್ನೂ ಬಯಸದೇ ಇವರು ನಮಗೆ ಯಾವಾಗಲೂ ಪ್ರೀತಿಯಿಂದ ಉಪಕಾರವನ್ನು ಮಾಡುತ್ತಿರುವ ಸಜ್ಜನರು. ಇಂಥವರನ್ನು ನಾವು ಪ್ರೀತಿಸಬೇಕೇ ಹೊರತು ಎಂದಿಗೂ ದ್ವೇಷಿಸಬಾರದು ಹಾಗೂ ತಿರಸ್ಕರಿಸಲೂ ಬಾರದು, ಮತ್ತು ದೂರಮಾಡಬಾರದು. ಉಪಕಾರ ಮಾಡಿದವರನ್ನು ಸ್ಮರಿಸುವುದೇ ಕೃತಜ್ಞತೆ, ತಿರಸ್ಕರಿಸುವುದೇ ಕೃತಘ್ನತೆ. ಮಾನವರು ಕೃತಜ್ಞರಾಗಿ ಬಾಳಬೇಕೇ ಹೊರತು ಕೃತಘ್ನರಾಗಿ ಅಲ್ಲ.

**ಮನುಷ್ಯರು ಕಳ್ಳತನ, ಪರಸ್ತ್ರೀಸಂಗಗಳನ್ನು ಮಾಡಬಾರದು**

## 30. ಈ ಆರು ಗುಣಗಳು ಇರಬೇಕು

**ಷಡೇವ ತು ಗುಣಾಃ ಪುಂಸಾ ನ ಹಾತವ್ಯಾಃ ಕದಾಚನ।**
**ಸತ್ಯಂ ದಾನಮನಾಲಸ್ಯಮನಸೂಯಾ ಕ್ಷಮಾ ಧೃತಿಃ॥**

*ಸತ್ಯ, ದಾನ, ಅನಾಲಸ್ಯ, ಅನಸೂಯಾ, ಕ್ಷಮಾ ಮತ್ತು ಧೃತಿ—ಈ ಆರೂ ಗುಣಗಳನ್ನು ಎಂದೆಂದಿಗೂ ಮಾನವರು ಬಿಡಬಾರದು.*

ಈ ಕೆಳಗಿನ ಆರು ಗುಣಗಳನ್ನು ಎಂದಿಗೂ ಮನುಷ್ಯರು ಬಿಡಬಾರದು.

೧. **ಸತ್ಯವಚನಂ:** ಮನುಷ್ಯರು ಸತ್ಯವನ್ನೇ ಹೇಳಬೇಕು. ಸುಳ್ಳನ್ನು ಹೇಳಲೇ ಬಾರದು. ಯಾವ ಸಂದರ್ಭದಲ್ಲಿಯೂ, ಎಷ್ಟೇ ಭಯವಿದ್ದರೂ ಮಾನವರು ಸತ್ಯವ್ರತವನ್ನು ಬಿಡಲೇಬಾರದು. ಸತ್ಯಕ್ಕಿಂತ ಹೆಚ್ಚಿನ ತಪಸ್ಸಿಲ್ಲ.

೨. **ದಾನಂ:** ದಾನವನ್ನು ಮಾಡಬೇಕು. ಪ್ರಶಸ್ತವಾದ ದೇಶ, ಪರ್ವಕಾಲ, ಸರಿಯಾದ ಪಾತ್ರಗಳು ದೊರಕಿದಾಗ ಯಥಾಶಕ್ತಿ ದಾನವನ್ನು ಮಾಡಲೇ ಬೇಕು. ದಾನದಿಂದಲೇ ಆನಂದ, ದಾನದಿಂದಲೇ ಸಂತೋಷ, ದಾನ ದಿಂದಲೇ ಪಾಪಕ್ಷಯ. ಆದ್ದರಿಂದ ದಾನವನ್ನು ಮಾಡಲೇಬೇಕು.

೩. **ಅನಾಲಸ್ಯಂ:** ಆಲಸ್ಯ ಎಂದರೆ ಸೋಮಾರಿತನ, ಅನಾಲಸ್ಯ ಎಂದರೆ ಚುರುಕಾಗಿರುವುದು. ಸೋಮಾರಿತನವೇ ಮಾನವರಿಗೆ ಮೃತ್ಯು, ಚುರುಕು ತನವೇ ಮಿತ್ರ. ಸೋಮಾರಿತನದಿಂದ ರೋಗರುಜಿನಾದಿಗಳು ಬರುತ್ತವೆ. ಆದ್ದರಿಂದ ಮನುಷ್ಯನು ಸೋಮಾರಿತನವನ್ನು ಬಿಟ್ಟುಬಿಡಬೇಕು.

೪. **ಅನಸೂಯಾ:** ಅಸೂಯೆಯೇ ಮಾನವರಿಗೆ ಶತ್ರು. ಅನಸೂಯೆಯೇ ಪುರುಷರಿಗೆ ಮಿತ್ರ. ಅನಸೂಯೆಯೆಂದರೆ ಇತರರ ಸಂಪತ್ತನ್ನು ನೋಡಿ ಅಸೂಯೆಯಿಲ್ಲದೇ ಸಂತೋಷಪಡುವುದು. ಹೊಟ್ಟೆಕಿಚ್ಚು ಇಲ್ಲದಿರುವಿಕೆ.

೫. **ಕ್ಷಮಾ:** ಕ್ಷಮಾಗುಣವು ಅತ್ಯಂತ ಶ್ರೇಷ್ಠವಾದ ಸಂಪತ್ತು. ತಪ್ಪುಮಾಡಿದವ ರಲ್ಲಿ ಕ್ಷಮೆಯನ್ನು ತೋರಿಸಬೇಕು. ನಮ್ಮನ್ನು ನಿಂದಿಸಿದವರ ಮೇಲೆ 'ಮುಯ್ಯಿಗೆ ಮುಯ್ಯಿ' ಪ್ರಹಾರವನ್ನು ಮಾಡದೇ ಅವರ ಅಪರಾಧಗಳನ್ನೆಲ್ಲ ಮನ್ನಿಸುವ ದೊಡ್ಡಗುಣವೇ ಕ್ಷಮಾ. ಕ್ಷಮಾಗುಣವನ್ನು ಬೆಳೆಸಿಕೊಳ್ಳಬೇಕು.

೬. **ಧೃತಿ:** ಧೈರ್ಯ. ಸಂಸಾರದಲ್ಲಿ ಕಷ್ಟನಷ್ಟಗಳು, ಮಾನ ಅಪಮಾನಗಳು ಬಂದಾಗ ವಿವೇಕದಿಂದ ಸಹಿಸಿಕೊಳ್ಳುವ ಸಾಮರ್ಥ್ಯವೇ ಧೃತಿ.

**ಮನುಷ್ಯರು ಸತ್ಯ, ದಾನ, ಕ್ಷಮಾ, ಧೈರ್ಯಗಳನ್ನು ಬಿಡಬಾರದು**

# 31. ಈ ನಾಲ್ಕೂ ನಷ್ಟವೇ

ನಷ್ಟಂ ಸಮುದ್ರೇ ಪತಿತಂ ನಷ್ಟಂ ವಾಕ್ಯಮಶೃಣ್ವತಿ।
ಅನಾತ್ಮನಿ ಶ್ರುತಂ ನಷ್ಟಂ ನಷ್ಟಂ ಹುತಮನಗ್ನಿಕಮ್॥

*ಸಮುದ್ರದಲ್ಲಿ ಬಿದ್ದದ್ದು ನಷ್ಟವಾಗುತ್ತದೆ, ಶ್ರದ್ಧೆಯಿಂದ ಶ್ರವಣ ಮಾಡದವನಿಗೆ ಹೇಳಿದ ವಾಕ್ಯವೂ ನಷ್ಟವೇ, ಇಂದ್ರಿಯನಿಗ್ರಹವಿಲ್ಲದವನಿಗೆ ಪಾಂಡಿತ್ಯವು ನಷ್ಟ, ಬೂದಿಯಲ್ಲಿ ಹೋಮಮಾಡಿದ್ದೂ ನಷ್ಟವಾಗುತ್ತದೆ.*

ಈ ನಾಲ್ಕು ವಸ್ತುಗಳು ನಷ್ಟವಾಗಿಬಿಡುತ್ತವೆ:

೧. **ಸಮುದ್ರೇ ಪತಿತಂ ನಷ್ಟಮ್**: ಸಮುದ್ರದಲ್ಲಿ ಏನೇ ಬಿದ್ದರೂ ಅದು ನಷ್ಟವಾಗುತ್ತದೆ. ಸಮುದ್ರ ಎಂದರೆ ಸಾಗರ; ಇದಕ್ಕೆ ಆಳವಾಗಲೀ ಉದ್ದಗಲವಾಗಲೀ ಇಲ್ಲ; ಅತ್ಯಂತ ವಿಶಾಲವಾದ ಸಮುದ್ರದಲ್ಲಿ ಉಂಗುರ, ಸರ, ಮನುಷ್ಯರು, ಏರೋಪ್ಲೇನ್, ಹಡಗು, ಏನೇ ಬಿದ್ದು ಮುಳುಗಿತು ಎಂದರೆ ಅದು ನಷ್ಟವಾದಂತೆಯೇ. ಸಮುದ್ರದಲ್ಲಿ ಮೊಬೈಲ್ ಬಿತ್ತು ಎಂದರೆ ಅದಕ್ಕೆ ಸಮುದ್ರವೇ ಗತಿ. ಅದು ಪುನಃ ಸಿಕ್ಕುವುದಿಲ್ಲ.

೨. **ಅಶೃಣ್ವತಿ ವಾಕ್ಯಂ ನಷ್ಟಮ್**: ಕೇಳಿಸಿಕೊಳ್ಳದವನಿಗೆ ಏನನ್ನೇ ಹೇಳಿದರೂ ಅದು ವ್ಯರ್ಥ. ಕೇಳಬೇಕೆಂಬ ಶ್ರದ್ಧೆಯೇ ಇಲ್ಲದವನಿಗೆ, ಹೇಳಿದ ವೇದ ವೇದಾಂತ ಪುರಾಣ ಪ್ರವಚನಗಳೆಲ್ಲವೂ ದಂಡ. ಏಕೆಂದರೆ ಅವನು ಅದನ್ನು ಕೇಳಿಸಿಕೊಳ್ಳುತ್ತಲೇ ಇಲ್ಲವಲ್ಲ. ಶ್ರದ್ಧೆಯಿಂದ ಕೇಳುವವನಿಗೇ ಪಾಠಗಳನ್ನು ಹೇಳಿಕೊಡಬೇಕು ಎಂದರ್ಥ.

೩. **ಅನಾತ್ಮನಿ ಶ್ರುತಂ ನಷ್ಟಮ್**: ಚಿತ್ತಶುದ್ಧಿಯಿಲ್ಲದವನಿಗೆ, ಇಂದ್ರಿಯಗಳನ್ನು ಸಂಯಮಮಾಡಿಕೊಳ್ಳದವನಿಗೆ ಶಾಸ್ತ್ರವು ವ್ಯರ್ಥವಾಗುತ್ತದೆ. ಶಾಸ್ತ್ರದ ಪ್ರಯೋಜನವು ಶಮದಮಾದಿಸಂಪನ್ನರಿಗೇ ಹೊರತು ಸ್ವೇಚ್ಛಾವಿಹಾರಿಗಳಿಗಾಗಲೀ ಅನಾಚಾರಿದುರಾಚಾರಿಗಳಿಗಾಗಲೀ ಅಲ್ಲ.

೪. **ಅನಗ್ನಿಕಂ ಹುತಂ ನಷ್ಟಮ್**: ಅಗ್ನಿಯು ಉರಿಯದೇ ಇರುವಂಥ, ಬರೀ ಬೂದಿ ತುಂಬಿರುವಂಥ ಕುಂಡದಲ್ಲಿ ಮಾಡಿದ ಹೋಮವೂ ವ್ಯರ್ಥ. ಹುತವು ಚೆನ್ನಾಗಿ ಪಚನವಾದಾಗಲೇ ಅದಕ್ಕೆ ಸಾಫಲ್ಯ. ಮಂತ್ರಪೂರ್ವಕವಾಗಿ ಹಾಕಿದ ಪದಾರ್ಥಗಳು ಪೂರ್ಣವಾಗಿ ಭಸ್ಮವಾಗಬೇಕಾದರೆ ಆ ಅಗ್ನಿಕುಂಡದಲ್ಲಿ ಅಗ್ನಿಯು ಜೋರಾಗಿ ಚೆನ್ನಾಗಿ ಉರಿಯುತ್ತಿರಬೇಕಲ್ಲವೇ?

**ಶಾಸ್ತ್ರವಿದ್ವಾಂಸರುಗಳು ಆಚಾರವಿಚಾರವಂತರಾಗಿರಬೇಕು**

# 32. ಇಂಥವರ ಸ್ನೇಹವು ಬೇಡ

ಅವಲಿಪ್ತೇಷು ಮೂರ್ಖೇಷು ರೌದ್ರಸಾಹಸಿಕೇಷು ಚ ।
ತಥೈವಾಪೇತಧರ್ಮೇಷು ನ ಮೈತ್ರೀಮಾಚರೇದ್ ಬುಧಃ ॥

*ದುರಹಂಕಾರಿಗಳು, ಮೂರ್ಖರು, ಒರಟು ಕೋಪಿಷ್ಠರು, ತುಂಬಾ ದುಡುಕು ಸ್ವಭಾವದವರು ಮತ್ತು ಅಧರ್ಮಿಷ್ಠರು—ಇಂಥವರೊಂದಿಗೆ ವಿವೇಕಿಯಾದ ಬುದ್ಧಿವಂತನು ಸ್ನೇಹವನ್ನು ಮಾಡಬಾರದು.*

ಬುದ್ಧಿವಂತರು ಈ ಕೆಳಗಿನ ಐವರೊಂದಿಗೆ ಸ್ನೇಹವನ್ನು ಬೆಳಸಬಾರದು:

೧. **ಅವಲಿಪ್ತೇಷು ಬುಧಃ ಮೈತ್ರೀಂ ನ ಆಚರೇತ್:** ದುರಹಂಕಾರಿಗಳೊಡನೆ ಬುದ್ಧಿವಂತನು ಮೈತ್ರಿಯನ್ನು ಬೆಳಸಿಕೊಳ್ಳಬಾರದು. ಧನದಿಂದ, ಅಧಿಕಾರದಿಂದ, ವಿದ್ಯೆಯಿಂದ ಮಾನವರಿಗೆ ದುರಹಂಕಾರವು ಬಂದುಬಿಡುತ್ತದೆ. ಇಂಥ ದುರಹಂಕಾರಿಗಳ ಚಿತ್ತವು ತುಂಬಾ ಚಂಚಲವೂ ಕಠೋರವೂ ಆಗಿರುತ್ತದೆ. ಆದ್ದರಿಂದ ಈ ದುರಹಂಕಾರಿಗಳ ಸಹವಾಸವನ್ನು ಮಾನವರು ಮಾಡಬಾರದು.

೨. **ಮೂರ್ಖೇಷು:** ಮೂರ್ಖರೊಂದಿಗೆ ಸ್ನೇಹವನ್ನು ಬೆಳಸಿಕೊಳ್ಳಬಾರದು. ಇತರರ ಮಾತನ್ನು ಕೇಳದೇ ತಾವೇ ಬುದ್ಧಿವಂತರೆಂದು ಭಾವಿಸುವವರೇ ಮೂರ್ಖರು. ಸ್ವತಃ ಬುದ್ಧಿಯಿಲ್ಲದ ಇಂಥ ಮೂರ್ಖರ ಸಹವಾಸವನ್ನಂತೂ ಬುದ್ಧಿವಂತರು ಎಂದೆಂದಿಗೂ ಮಾಡಬಾರದು.

೩. **ರೌದ್ರೇಷು:** ಹೆಜ್ಜೆಹೆಜ್ಜೆಗೂ ಕೋಪವನ್ನು ಮಾಡಿಕೊಳ್ಳುತ್ತಾ, ಒರಟಾದ ಮಾತುಗಳನ್ನೇ ಆಡುತ್ತಾ, ರೌಡಿಗಳಂತಿರುವವರೇ ರೌದ್ರರು. ಇಂಥವರ ಸಹವಾಸವನ್ನಾಗಲೀ ಸ್ನೇಹವನ್ನಾಗಲೀ ವಿವೇಕಿಯು ಮಾಡಬಾರದು.

೪. **ಸಾಹಸಿಕೇಷು ಮೈತ್ರೀಂ ನ ಆಚರೇತ್:** ಯಾರ ಮಾತುಗಳನ್ನೂ ಕೇಳದೇ, ಕೂಡಲೇ ದುಡುಕಿನಿಂದ ಏನಾದರೊಂದು ಸಾಹಸದ ಕೆಲಸವನ್ನು ಮಾಡುವವರೇ ಸಾಹಸಿಕರು. ಇಂಥವರ ಸ್ನೇಹವೂ ಅಪಾಯಕಾರಿ. ಇವರು ಯಾವಾಗ ಏನು ಮಾಡಿಬಿಡುತ್ತಾರೋ ಗೊತ್ತಾಗುವುದಿಲ್ಲ.

೫. **ಅಪೇತಧರ್ಮೇಷು ಮೈತ್ರೀಂ ನ ಆಚರೇತ್:** ಧರ್ಮಭ್ರಷ್ಟರೊಂದಿಗೆ ಸ್ನೇಹವನ್ನು ಮಾಡಿಕೊಳ್ಳಬಾರದು. ಅಧರ್ಮ, ಅಸತ್ಯಗಳನ್ನೇ ಹೇಳುತ್ತಾ ಅನಾಚಾರಿಯಾಗಿರುವವರ ಸಹವಾಸವನ್ನಂತೂ ಮಾಡಲೇಬಾರದು.

**ದುರಹಂಕಾರಿಗಳ, ಮೂರ್ಖರ ಸ್ನೇಹವನ್ನು ಮಾಡಬಾರದು**

# 33. ಇವರುಗಳಲ್ಲಿ ವಿಶ್ವಾಸವನ್ನು ಇಡಬಾರದು

ಸ್ತ್ರೀಷು ರಾಜಸು ಸರ್ಪೇಷು ಸ್ವಾಧ್ಯಾಯಪ್ರಭುಶತ್ರುಷು ।
ಭೋಗೇಷ್ವಾಯುಷಿ ವಿಶ್ವಾಸಂ ಕಃ ಪ್ರಾಜ್ಞಃ ಕರ್ತುಮರ್ಹತಿ? ॥

*ಸ್ತ್ರೀಯರು, ರಾಜರುಗಳು, ಸರ್ಪಗಳು, ಸ್ವಾಧ್ಯಾಯ, ಶ್ರೀಮಂತರು, ಶತ್ರುಗಳು, ಭೋಗಗಳು ಮತ್ತು ಆಯುಷ್ಯಗಳಲ್ಲಿ ಯಾವ ಪ್ರಾಜ್ಞನುತಾನೇ ಸಂಪೂರ್ಣವಾಗಿ ವಿಶ್ವಾಸವನ್ನು ಇಡುತ್ತಾನೆ? ಎಂದರೆ, ಸಂಪೂರ್ಣ ವಿಶ್ವಾಸವನ್ನು ಇಡಬಾರದೆಂದರ್ಥ.*

ಈ ಎಂಟು ವಿಷಯಗಳಲ್ಲಿ ಪೂರ್ಣವಿಶ್ವಾಸವನ್ನು ಇಡಬಾರದು:

೧. **ಸ್ತ್ರೀಯರನ್ನು ಪೂರ್ಣವಾಗಿ ನಂಬಬಾರದು:** ಚಂಚಲ ಸ್ವಭಾವದ ಸ್ತ್ರೀಯರಿಗೆ ನಿಶ್ಚಯಜ್ಞಾನವು ಇರುವುದು ಕಷ್ಟ. ಆದ್ದರಿಂದ ಸ್ತ್ರೀಯರಲ್ಲಿ ಸಂಪೂರ್ಣವಿಶ್ವಾಸವನ್ನು ಬುದ್ಧಿವಂತನು ಇಡಬಾರದು.

೨. **ರಾಜರನ್ನು ಪೂರಾ ನಂಬಬಾರದು:** ರಾಜರೆಂದರೆ ಅವರ ಜೀವನ ಕ್ರಮವೇ ಬೇರೆ; ಅವರ ಮೋಜಿನ ಭರಾಟೆಯಲ್ಲಿ ಅವರು ಏನಾದರೂ ಪ್ರತಿಜ್ಞೆಮಾಡಿದ್ದರೆ, ಅವರಿಗೆ ಅದು ಆಮೇಲೆ ಮರೆತೇಹೋಗಿಬಿಡುತ್ತದೆ. ಅವರಿಗೆ ಏಕನಿಷ್ಠೆಯಾಗಲೀ, ಪ್ರತಿಜ್ಞಾಪಾಲನೆಯಾಗಲೀ ಇರಲಾರದು. ಆದ್ದರಿಂದ ರಾಜರಲ್ಲಿ ಪೂರ್ಣವಿಶ್ವಾಸವನ್ನಿಡಬಾರದು.

೩. **ಸರ್ಪಗಳನ್ನು ನಂಬಬಾರದು:** ಸರ್ಪದಿಂದ ಹಾವಾಡಿಗನಿಗೂ ಭಯವು ತಪ್ಪಿದ್ದಲ್ಲ. ಯಾವಾಗಲಾದರೂ ಅದು ಕಚ್ಚಿಬಿಡಬಹುದು.

೪. **ಸ್ವಾಧ್ಯಾಯವನ್ನು ನಂಬಬಾರದು:** ನಾನು ಚೆನ್ನಾಗಿ ಅಧ್ಯಯನ ಮಾಡಿದ್ದೇನೆ, ನನಗೆ ಚೆನ್ನಾಗಿ ಪಾಠವೆಲ್ಲ ಗೊತ್ತಿದೆ; ಪರೀಕ್ಷೆಯಲ್ಲಿ ಎಲ್ಲಾ ಪ್ರಶ್ನೆಗಳಿಗೂ ಉತ್ತರಗಳನ್ನು ಬರೆಯುತ್ತೇನೆ; ನಾನು ಫಸ್ಟ್‌ರ್‍ಯಾಂಕ್‌ನಲ್ಲೇ ತೇರ್ಗಡೆಯಾಗುತ್ತೇನೆ—ಎಂದೆಲ್ಲ ಜಂಭಪಡಬಾರದು. ಏಕೆಂದರೆ ಆ ಸ್ವಾಧ್ಯಾಯವೆಲ್ಲ ಪರೀಕ್ಷಾಕಾಲದಲ್ಲಿ ಮರೆತೇಹೋಗಿಬಿಡಬಹುದು.

೫. **ಶ್ರೀಮಂತರನ್ನು ನಂಬಬಾರದು:** ತಮ್ಮ ಸಂಪತ್ತಿನಲ್ಲಿ ಮುಳುಗಿರುವ ಶ್ರೀಮಂತರಿಗೆ ಇನ್ನೊಬ್ಬರ ವಿಚಾರವು ಬೇಕಾಗಿಲ್ಲ.

೬. **ಶತ್ರುಗಳನ್ನಂತೂ ನಂಬಲೇಬಾರದು:** ಇವರು ಶತ್ರುಗಳಲ್ಲವೇ?

೭. **ಭೋಗಗಳನ್ನು ನಂಬಬಾರದು:** ಭೋಗಗಳೆಲ್ಲವೂ ನಶ್ವರ.

೮. **ಆಯುಷ್ಯವನ್ನು ನಂಬಬಾರದು:** ಆಯುಷ್ಯವು ಸೋರಿಹೋಗುತ್ತಿದೆ.

**ವಿವೇಕಿಯು ಸ್ತ್ರೀಯರೇ ಮುಂತಾದವರನ್ನು ಪೂರ್ಣವಾಗಿ ನಂಬಬಾರದು**

# 34. ಇವರಿಬ್ಬರೂ ಮುಳ್ಳಿನಂತೆ

ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರಪರಿಶೋಷಿಣೌ ।
ಯಶ್ಚಾಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥

*ದರಿದ್ರನಾಗಿದ್ದೂ ದುರಾಶೆಯುಳ್ಳ ಮನುಷ್ಯನು, ಮತ್ತು ಭಿಕ್ಷುಕನಾಗಿದ್ದೂ ಎಂದರೆ ದಾಸನಾಗಿದ್ದೂ ಕೋಪಿಷ್ಠನಾಗಿರುವವನು; ಇವರಿಬ್ಬರೂ ಶರೀರವನ್ನು ಒಣಗಿಸುವ ತೀಕ್ಷ್ಣವಾದ ಮುಳ್ಳಿನಂತಿರುತ್ತಾರೆ.*

ದುರಾಶೆಯೆಂಬುದೇ ದುಃಖಕ್ಕೆ ಮೂಲ. ತುಂಬಾ ಶ್ರೀಮಂತನೇ ಆಗಿದ್ದರೂ ದುರಾಶೆಗೆ ಒಳಗಾದರೆ ಅವನಿಗೆ ಶಾಂತಿಯಾಗಲೀ ತೃಪ್ತಿಯಾಗಲೀ ಸಿಕ್ಕುವುದಿಲ್ಲ. ಇನ್ನು ದರಿದ್ರನಾಗಿದ್ದುಕೊಂಡು ಸುಮ್ಮನೇ ದುರಾಶೆಗಳಿಗೆ ಬಲಿಯಾಗುತ್ತಿದ್ದರೆ ಅದರಿಂದ ಅವನಿಗೆ ಸುಖವಾಗಲೀ ಶಾಂತಿಯಾಗಲೀ ಖಂಡಿತಾ ಸಿಕ್ಕುವುದಿಲ್ಲ. ರಾಜಕೀಯದ ಗಂಧವೇ ಇಲ್ಲದ ಒಬ್ಬನು ತಾನು ಪ್ರಧಾನಮಂತ್ರಿಯಾಗಬೇಕೆಂದು ಬಯಸಿದಂತೆ; ತನ್ನ ಊಟತಿಂಡಿಗೂ ಗತಿಯಿಲ್ಲದ ಮಾನವನು ಮಹಾರಾಜನ ಅರಮನೆಯನ್ನು ಬಯಸಿದಂತೆ; ಸಹಿಮಾಡಲೂ ಬಾರದ ದಡ್ಡನು ತಾನು ವಿಶ್ವವಿದ್ಯಾಲಯಕ್ಕೆ ಕುಲಪತಿಯಾಗಲು ಬಯಸಿದಂತೆ; ಅಂತೂ ದರಿದ್ರನು ಮಹಾರಾಜನ ಸಂಪತ್ತನ್ನು ಬಯಸಿದರೆ ಅದು ಅವನಿಗೆ ಮುಳ್ಳಿನಂತೆ ಯಾವಾಗಲೂ ದುಃಖಕ್ಕೇ ಕಾರಣವಾಗುತ್ತದೆ.

ಇನ್ನು, ಕೋಪದ ವಿಚಾರ. ಕೋಪವೇ ಅನರ್ಥಕ್ಕೆ ಕಾರಣ. ಕೋಪದಿಂದ ಎಷ್ಟು ಬೇಕಾದರೂ ಅನರ್ಥಗಳಾಗಬಹುದು. ರಾಜನ ಕೋಪಕ್ಕೆ ಅರ್ಥವಿದೆ, ಶ್ರೀಮಂತರ ಕೋಪಕ್ಕೂ ಬೆಲೆ ಇದೆ; ಗುರುವಿನ ಕೋಪಕ್ಕೂ ಫಲವಿದೆ; ಆದರೆ ಬಡವನ ಕೋಪಕ್ಕೆ ಅರ್ಥವಿಲ್ಲ. ಮೊದಲೇ ಇವನು ಅನೀಶ್ವರ, ಎಂದರೆ ದಾಸ, ಜೀತದ ಆಳು; ಜೊತೆಗೆ ದರಿದ್ರ ಕೂಡ. ಇವನು ತನ್ನ ಜೀವನವನ್ನು ದಾಸನಾಗಿಯೇ ಸಾಗಿಸಬೇಕಾಗಿದೆ. ತಾನೇ ಸೇವಕನಾಗಿ, ಆಳಾಗಿ, ದಾಸನಾಗಿ, ಗುಲಾಮನಾಗಿ ಬದುಕಿರುವಾಗ ಇವನು ಕೋಪವನ್ನೂ ಮಾಡಿಕೊಂಡರೆ ಅದನ್ನು ಕೇಳುವವರಾರು? ಇದರಿಂದ ಅವನೇ ಪರಿತಪಿಸಬೇಕಾಗುತ್ತದೆ. ಕೋಪವನ್ನು ಮಾಡಿಕೊಳ್ಳಬೇಕಾದರೂ ಅವನಿಗೆ ಹಣ, ಅಧಿಕಾರ, ವಿದ್ಯೆ, ಅಂತಸ್ತು, ಯೋಗ್ಯತೆಗಳು ಇರಬೇಕಲ್ಲವೇ? ಬಡವನ ಕೋಪವು ಆ ಬಡವನಿಗೇ ಮುಳ್ಳಾಗಿಬಿಡುತ್ತದೆ. ಎಚ್ಚರಿಕೆ! ಬಡವನು ಅತ್ಯಾಶೆಗಳನ್ನು ಮಾಡಿಕೊಳ್ಳಬಾರದು, ಸೇವಕನು ತುಂಬಾ ಕೋಪಗಳಿಗೆ ವಶನಾಗಬಾರದು.

**ಗುಲಾಮನಾದ ಬಡವನು ಅತ್ಯಾಶೆಗಳಿಗೆ ತುತ್ತಾಗಬಾರದು**

## 35. ಇವರಿಬ್ಬರೂ ಉಚ್ಚತಮರು

**ದ್ವಾವಿಮೌ ಪುರುಷೌ ರಾಜನ್ ಸ್ವರ್ಗಸ್ಯೋಪರಿ ತಿಷ್ಠತಃ।**
**ಪ್ರಭುಶ್ಚ ಕ್ಷಮಯಾ ಯುಕ್ತಃ ದರಿದ್ರಶ್ಚ ಪ್ರದಾನವಾನ್॥**

*ಕ್ಷಮಾಗುಣಯುಕ್ತನಾದ ರಾಜ ಮತ್ತು ದಾನಶೀಲನಾದ ದರಿದ್ರ—ಇವರಿಬ್ಬರೂ, ಎಲೈ ಧೃತರಾಷ್ಟ್ರನೇ, ಸ್ವರ್ಗಕ್ಕಿಂತಲೂ ಮೇಲ್ಗಡೆಯಲ್ಲಿ ಇರುತ್ತಾರೆ.*

ಪ್ರಭು ಎಂದರೆ ಮಹಾರಾಜ, ಭೂಪತಿ. ಇವನಿಗೆ ಸರ್ವಾಧಿಕಾರಗಳೂ ಇರುತ್ತವೆ. ಇವನು ಯಾರಿಗೆಬೇಕಾದರೂ ಏನೇ ಶಿಕ್ಷೆಗಳನ್ನೂ ಕೊಡಬಲ್ಲ. ಏಕೆಂದರೆ ಇವನು ಮಹಾರಾಜ. ಅಪರಾಧಿಗಳಿಗೆ ದಂಡವನ್ನು ಕೊಡುವವ ನಿವನು. ಅಪರಾಧಗಳಿಗೆ ತಕ್ಕಂತೆ ಶಿಕ್ಷೆಯನ್ನು ಕೊಡುವವನೇ ಪ್ರಭು. ಆದರೆ, ಇಂಥ ರಾಜನಿಗೆ ಕ್ಷಮಾಗುಣವೇನಾದರೂ ಇದೆ ಎಂದಾದರೆ, ಅದೊಂದು ಅದ್ಭುತಪವಾಡವೇ ಸರಿ. ಸರ್ವಾಧಿಕಾರವುಳ್ಳವನೇ ಆಗಿದ್ದರೂ ರಾಜನಿಗೆ ಕ್ಷಮಾಗುಣವು ಒಂದು ವರವೇ ಸರಿ. ಕೆಲವು ಪ್ರಕರಣಗಳಲ್ಲಿ ರಾಜನು ಕ್ಷಮಾಗುಣಸಂಪನ್ನನೂ ಆಗಿರಬೇಕಾಗುತ್ತದೆ. ಉದಾಹರಣೆಗೆ: ಒಬ್ಬ ಮಹಾತ್ಮನಾದ ಸಂನ್ಯಾಸಿಯು ಏನೋ ಕಾರಣದಿಂದ ಮಹಾಪರಾಧವನ್ನು ಮಾಡಿರುತ್ತಾನೆ. ಇದಕ್ಕೆ ಇವನಿಗೆ ಮರಣದಂಡನೆಯೇ ಶಿಕ್ಷೆಯಾಗಬೇಕಾಗಿದೆ. ಆದರೆ ಇಂಥ ಸಂದರ್ಭದಲ್ಲಿ ಪ್ರಭುವಾದ ರಾಜನು ಇವನಿಗೆ ಕ್ಷಮಾಗುಣದಿಂದ ಆ ಶಿಕ್ಷೆಯನ್ನು ತಪ್ಪಿಸಬಹುದಾಗಿದೆ. ಇದು ರಾಜನ ದೊಡ್ಡತನವಲ್ಲವೇ?

ದರಿದ್ರನಾಗಿದ್ದರೂ ದಾನಶೂರನಾಗಿರುವುದು ದೊಡ್ಡಗುಣವೇ ಆಗಿದೆ. ತಾನೇ ದರಿದ್ರ, ತನ್ನಲ್ಲಿ ಸಂಪತ್ತಿಲ್ಲ; ಆದರೆ ದಾನಶೂರನಾಗಿದ್ದಾನೆ ಎಂದರೆ ಅವನು ಮಹಾತ್ಮನಲ್ಲವೇ? ಉದಾಹರಣೆಗೆ: ಒಬ್ಬ ದರಿದ್ರ, ಅವನಿಗೆ ಐದು ಹೆಣ್ಣುಮಕ್ಕಳಿದ್ದಾರೆ, ಅವರನ್ನು ಸಾಕುವಷ್ಟು ಅವನಲ್ಲಿ ಹಣವಿಲ್ಲ; ಆದರೆ ಬೇರೊಬ್ಬ ಗೃಹಸ್ಥ ಬಂದು 'ನನ್ನ ಮಗಳ ಮದುವೆಗೆ ಏನಾದರೂ ಸಹಾಯ ಮಾಡಿ' ಎಂದು ಕೇಳಿದಾಗ ಇವನು ತಾನು ಸಂಗ್ರಹಿಸಿದ್ದ, ಸಂಪಾದಿಸಿದ್ದ ಹಣದಲ್ಲಿ ಸ್ವಲ್ಪ ಹಣವನ್ನು ಅವನಿಗೆ ಸಂತೋಷದಿಂದ ಕೊಟ್ಟನು ಎಂದಾಗ ಆ ದರಿದ್ರನಾದ ದಾನಿಯು ಮಹಾತ್ಮನಲ್ಲವೇ? ಹೀಗೆ ರಾಜನಾಗಿದ್ದೂ ಕ್ಷಮಾಗುಣಸಂಪನ್ನನಾಗಿರು ವವನು, ದರಿದ್ರನಾಗಿದ್ದೂ ಉದಾರಿಯಾಗಿರುವವನು—ಇವರಿಬ್ಬರೂ ಸ್ವರ್ಗ ಕ್ಕಿಂತಲೂ ಮೇಲುಗಡೆಯಲ್ಲಿ ಇರುತ್ತಾರಲ್ಲವೇ? ಉಚ್ಚತಮರಿವರು!

**ರಾಜರು ಕ್ಷಮಾಗುಣವಂತರೂ, ದರಿದ್ರರು ದಾನಶೀಲರೂ ಆಗಿರಬೇಕು**

## 36. ಒಬ್ಬಂಟಿಗನಾಗಿ ಈ ನಾಲ್ಕನ್ನು ಮಾಡಬಾರದು

**ಏಕಃ ಸ್ವಾದು ನ ಭುಂಜೀತ ಏಕಶ್ಚಾರ್ಥಾನ್ ನ ಚಿಂತಯೇತ್।**
**ಏಕೋ ನ ಗಚ್ಛೇದಧ್ವಾನಂ ನೈಕಃ ಸುಪ್ತೇಷು ಜಾಗೃಯಾತ್॥**

*ಒಬ್ಬನೇ ಸಿಹಿಯನ್ನು ತಿನ್ನಬಾರದು, ಒಬ್ಬನೇ ಮಂತ್ರಾಲೋಚನೆಯನ್ನು ಮಾಡಬಾರದು, ಒಬ್ಬಂಟಿಗನಾಗಿ ಯಾತ್ರೆಗೆ ಹೋಗಬಾರದು, ಎಲ್ಲರೂ ಮಲಗಿರುವಾಗ ತಾನೊಬ್ಬನೇ ಎಚ್ಚರವಾಗಿರಲೂ ಬಾರದು.*

ಈ ನಾಲ್ಕು ಕಾರ್ಯಗಳನ್ನು ಒಬ್ಬೊಬ್ಬನೇ ಮಾಡಬಾರದು:

೧. **ಏಕಃ ಸ್ವಾದು ನ ಭುಂಜೀತ:** ಮೃಷ್ಟಾನ್ನವನ್ನು ತಾನು ಒಬ್ಬನೇ ತಿನ್ನಬಾರದು. ಮನೆಯಲ್ಲಿ ಪತ್ನಿ, ಮಕ್ಕಳು, ತಂದೆತಾಯಿ, ಅಣ್ಣತಮ್ಮಂದಿರು ಎಲ್ಲರೂ ಇರುವಾಗ ಯಾರಿಗೂ ತಿಳಿಯದಂತೆ ಒಬ್ಬನೇ ಹೋಟೆಲ್‌ಗೆ ಹೋಗಿ ಮೈಸೂರ್ ಪಾಕ್, ಜಿಲೇಬಿ ಸಹಿತ ಊಟವನ್ನು ಮಾಡಿಕೊಂಡು ಬರಬಾರದು. ಏಕೆಂದರೆ ಇದು ಸರಿಯಲ್ಲ.

೨. **ಏಕಶ್ಚಾರ್ಥಾನ್ ನ ಚಿಂತಯೇತ್:** ಒಂದು ಕುಟುಂಬದ ಬಗ್ಗೆ, ಸಂಸ್ಥೆಯ ಬಗ್ಗೆ, ಆಶ್ರಮದ ಬಗ್ಗೆ, ರಾಜ್ಯದ ಬಗ್ಗೆ—ಮಂತ್ರಾಲೋಚನೆಯನ್ನು ಒಬ್ಬನೇ ಮಾಡಬಾರದು. ಹಣಕಾಸಿನ ವ್ಯವಹಾರದಲ್ಲಿಯೂ ಮನುಷ್ಯನು ತಾನೊಬ್ಬನೇ ಆಲೋಚನೆಯನ್ನು ಮಾಡಬಾರದು, ಸಹೃದಯರಾದ ಹತ್ತಾರು ಜನಗಳು ಸೇರಿಕೊಂಡೇ ಅಂಥ ವಿಚಾರಗಳನ್ನು ಮಾಡಬೇಕು.

೩. **ಏಕೋ ನ ಗಚ್ಛೇದಧ್ವಾನಂ:** ಒಬ್ಬಂಟಿಗನಾಗಿ ಯಾತ್ರೆಗೆ ಹೋಗಬಾರದು. ಕಾಶೀ, ರಾಮೇಶ್ವರ, ಬದರಿ, ಕೇದಾರ್ ಮುಂತಾದ ದೂರದ ಪ್ರಯಾಣವನ್ನು ಒಬ್ಬಂಟಿಗನಾಗಿ ಮಾಡಬಾರದು. ಪರಸ್ಥಳಗಳಿಗೂ ಒಬ್ಬಂಟಿಗನಾಗಿ ಹೋಗಬಾರದು. ಮನೆಯಿಂದ ಹೊರಗಡೆಗೆ ಹೋಗುವಾಗಲೂ ಕೂಡ ಜೊತೆಗೆ ಇನ್ನೊಬ್ಬರಿದ್ದರೆ ತುಂಬಾ ಒಳ್ಳೆಯದು. ಸ್ಕೂಟರ್, ಮೋಟಾರ್ ಸೈಕಲ್‌ಗಳಲ್ಲಿ ಒಬ್ಬರೇ ದೂರದ ಪರಸ್ಥಳಗಳಿಗೆ ಹೋಗಬಾರದು.

೪. **ನೈಕಃ ಸುಪ್ತೇಷು ಜಾಗೃಯಾತ್:** ಪರಸ್ಥಳಕ್ಕೆ ಹೋದಾಗ ಅಲ್ಲಿ ಎಲ್ಲರೂ ಮಲಗಿರುವಾಗ ತಾನೊಬ್ಬನೇ ಎಚ್ಚರವಾಗಿರಬಾರದು. ತಾನೊಬ್ಬನೇ ಎಚ್ಚರವಾಗಿದ್ದರೆ ಅಲ್ಲಿ ಕಳ್ಳರು ಬಂದಾಗ, ರೌಡಿಗಳು ಬಂದಾಗ, ಅವರನ್ನು ಎದುರಿಸುವುದು ಒಬ್ಬನಿಗೇ ಕಷ್ಟವಾಗಬಹುದು.

**ಒಬ್ಬಂಟಿಗನಾಗಿ ದೂರಕ್ಷೇತ್ರಗಳಿಗೆ ಯಾತ್ರೆಗೆ ಹೋಗಬಾರದು**

# 37. ಸಂಪತ್ತಿಗೆ ದಾನವೇ ಫಲ

ಅಗ್ನಿಹೋತ್ರಫಲಾ ವೇದಾಃ ಶೀಲವೃತ್ತಫಲಂ ಶ್ರುತಮ್।
ರತಿಪುತ್ರಫಲಾ ನಾರೀ ದತ್ತಭುಕ್ತಫಲಂ ಧನಮ್॥

*ವೇದಗಳಿಗೆ ಅಗ್ನಿಹೋತ್ರಗಳೇ ಫಲ, ಪಾಂಡಿತ್ಯಕ್ಕೆ ಶೀಲವೃತ್ತಗಳೇ ಫಲ, ನಾರಿಗೆ ರತಿಪುತ್ರಗಳೇ ಫಲ, ಹಣಕ್ಕೆ ದಾನಭೋಗಗಳೇ ಫಲ.*

ವೇದ, ಪಾಂಡಿತ್ಯ, ಹೆಂಗಸು, ಧನಗಳಿಗೆ ಸಾಫಲ್ಯಗಳನ್ನು ಇಲ್ಲಿ ಹೇಳಿದೆ:

೧. **ವೇದಾಃ ಅಗ್ನಿಹೋತ್ರಫಲಾಃ:** ಅಗ್ನಿಹೋತ್ರವೇ ವೇದಗಳಿಗೆ ಫಲ. ವೇದಾಧ್ಯಯನವನ್ನು ಮಾಡಿದ ಬಳಿಕ, ಆ ಮಂತ್ರಗಳನ್ನು ಅಗ್ನಿಹೋತ್ರ ಕರ್ಮಗಳಲ್ಲಿ ವಿನಿಯೋಗಮಾಡಬೇಕು. ಅಗ್ನಿಹೋತ್ರಾನುಷ್ಠಾನವನ್ನು ಅಥವಾ ಸೋಮಯಾಗಾದಿಗಳನ್ನು ಮಾಡದೇ ಹೋದರೆ ತಾನು ಅಧ್ಯಯನಮಾಡಿದ ವೇದಗಳೆಲ್ಲವೂ ವ್ಯರ್ಥವಾದಂತೆಯೇ.

೨. **ಶ್ರುತಂ ಶೀಲವೃತ್ತಫಲಮ್:** ಶ್ರುತಕ್ಕೆ ಎಂದರೆ ಶಾಸ್ತ್ರಾಧ್ಯಯನಕ್ಕೆ ಶೀಲ ಸದಾಚಾರಗಳೇ ಫಲ. ಶಾಸ್ತ್ರಗಳನ್ನೆಲ್ಲ ಚೆನ್ನಾಗಿ ಅಧ್ಯಯನಮಾಡಿ ದೊಡ್ಡ ವಿದ್ವಾಂಸನಾಗಿದ್ದಾನೆ ಎಂದರೆ ಅವನು ಅದರಿಂದ ಶೀಲಸಂಪನ್ನನಾಗಿಯೂ ಸದಾಚಾರಸಂಪನ್ನನಾಗಿಯೂ ಸಮಾಜದಲ್ಲಿ ಗೌರವದಿಂದ ಬಾಳಬೇಕು. ದೊಡ್ಡ ಪಂಡಿತನಾಗಿದ್ದಾನೆ ಎಂದರೆ ಅವನು ಶೀಲಚಾರಿತ್ರ್ಯವಂತನಾಗಿರ ಬೇಕು. ಚಾರಿತ್ರ್ಯಶುದ್ಧಿಯಿಲ್ಲದವನ ಶಾಸ್ತ್ರಪಾಂಡಿತ್ಯಕ್ಕೆ ಬೆಲೆಯೇ ಇಲ್ಲ.

೩. **ನಾರೀ ರತಿಪುತ್ರಫಲಾ:** ಹೆಣ್ಣಾಗಿ ಹುಟ್ಟಿದ್ದಕ್ಕೆ ಗಂಡನಿಗೆ ರತಿಸುಖವನ್ನು ಕೊಡಬೇಕು, ಮಕ್ಕಳನ್ನು ಹೆರಬೇಕು. ಹೆಣ್ಣಿಗೆ ಇವೆರಡೂ ಫಲಗಳು. ಗಂಡನಿಗೆ ರತಿ ಆನಂದವನ್ನೂ ಕೊಡದೇ, ಮಕ್ಕಳನ್ನೂ ಹೆರದೇ ಹೋದರೆ ಅವಳು ಹೆಣ್ಣಾಗಿ ಹುಟ್ಟಿದ್ದೇ ವ್ಯರ್ಥ ಎಂಬುದು ಭಾರತೀಯ ಸಂಸ್ಕೃತಿ.

೪. **ಧನಂ ದತ್ತಭುಕ್ತಫಲಮ್:** ದಾನ ಮತ್ತು ಭೋಗಗಳೇ ಹಣಕ್ಕೆ ಫಲ. ಹಣಕ್ಕೆ ಸಾರ್ಥಕ್ಯ, ಸಾಫಲ್ಯ ಹೇಗೆ? ಎಂದರೆ ದಾನದಿಂದ ಮತ್ತು ಭೋಗ ದಿಂದ. ತಾನು ಭೋಗಿಸಬೇಕು, ಮತ್ತು ಸತ್ಪಾತ್ರಗಳಿಗೆ ದಾನಮಾಡಬೇಕು. ಹೀಗಾದರೇ ಅದು ಹಣಕ್ಕೆ ಸಾರ್ಥಕ್ಯವಾದಂತೆ. ತಾನೂ ಅನುಭವಿಸದೇ, ಇತರರಿಗೂ ದಾನಮಾಡದೇ ಹೋದರೆ ಆ ಹಣವು ಕಳ್ಳರ ಪಾಲಾಗಿ ಬಿಡುತ್ತದೆ, ಎಚ್ಚರಿಕೆ! ಹಣವು ಸಾರ್ಥಕವಾಗಬೇಕು.

**ವಿದ್ವಾಂಸರುಗಳು ಶೀಲ, ಚಾರಿತ್ರ್ಯಸಂಪನ್ನರಾಗಿರಬೇಕು**

# 38. ಸುಖಕ್ಕೆ ಸಾಧನವಿದು

ಏಕಯಾ ದ್ವೇ ವಿನಿಶ್ಚಿತ್ಯ ತ್ರೀನ್ ಚತುರ್ಭಿರ್ವಶೇ ಕುರು।
ಪಂಚ ಜಿತ್ವಾ ವಿದಿತ್ವಾ ಷಟ್ ಸಪ್ತ ಹಿತ್ವಾ ಸುಖೀ ಭವ॥

*ಒಂದರಿಂದ ಎರಡನ್ನು ನಿಶ್ಚಯಮಾಡಿಕೊಂಡು; ನಾಲ್ಕರಿಂದ ಮೂರನ್ನು ವಶಮಾಡಿಕೊಳ್ಳಬೇಕು; ಐದನ್ನು ಜಯಿಸಿಕೊಂಡು, ಆರನ್ನು ತಿಳಿದು, ಏಳನ್ನು ಬಿಟ್ಟು, ಎಲೈ ಧೃತರಾಷ್ಟ್ರನೇ, ಸುಖವಾಗಿರು.*

ಈ ಶ್ಲೋಕವು ಒಗಟಿನಂತಿದೆ; ಇದರ ಅಂತರಾರ್ಥವನ್ನು ನೋಡೋಣ:

**ಒಂದರಿಂದ ಎರಡನ್ನು ನಿಶ್ಚಯಮಾಡಿಕೊಳ್ಳಬೇಕು:** ಎರಡನ್ನು ಎಂದರೆ ಕರ್ತವ್ಯ ಮತ್ತು ಅಕರ್ತವ್ಯಗಳೆಂಬ ಎರಡನ್ನು; ಒಂದರಿಂದ ಎಂದರೆ ಬುದ್ಧಿಯಿಂದ, ನಿಶ್ಚಯಿಸಿಕೊಳ್ಳಬೇಕು. ಒಂದು ಕೆಲಸವನ್ನು ಮಾಡಬೇಕೇ? ಅಥವಾ ಬಿಡಬೇಕೇ? ಇದು ಒಳ್ಳೆಯದೇ? ಅಥವಾ ಕೆಟ್ಟದೇ? ಎಂಬುದನ್ನು ವಿವೇಕ ಬುದ್ಧಿಯಿಂದ ಸರಿಯಾಗಿ ಮೊಟ್ಟಮೊದಲು ನಿಶ್ಚಯಿಸಿಕೊಳ್ಳಬೇಕು.

**ನಾಲ್ಕರಿಂದ ಮೂರನ್ನು ವಶಮಾಡಿಕೊ:** ನಾಲ್ಕರಿಂದ ಎಂದರೆ ಸಾಮ, ದಾನ, ಭೇದ, ದಂಡಗಳಿಂದ; ಮೂರನ್ನು ಎಂದರೆ ಶತ್ರು, ಮಿತ್ರ, ಉದಾಸೀನರನ್ನು, ವಶಮಾಡಿಕೊಳ್ಳಬೇಕು. ಶತ್ರುಗಳನ್ನೂ ಮಿತ್ರರನ್ನೂ ಉದಾಸೀನರನ್ನೂ ಸಾಮ ದಾನ ಭೇದ ದಂಡಗಳಿಂದ ವಶಮಾಡಿಕೊಳ್ಳಬೇಕು.

**ಐದನ್ನು ಜಯಿಸಬೇಕು:** ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಕ್—ಎಂಬ ಪಂಚಜ್ಞಾನೇಂದ್ರಿಯಗಳನ್ನು ವಿವೇಕದಿಂದ ನಿಗ್ರಹಿಸಬೇಕು. ಇಂದ್ರಿಯಗಳು ಸ್ವೇಚ್ಛಾವಿಹಾರಮಾಡದಂತೆ ಅವುಗಳಿಗೆ ಕಡಿವಾಣವನ್ನು ಹಾಕಬೇಕು.

**ಆರನ್ನು ತಿಳಿದುಕೊಳ್ಳಬೇಕು:** ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯಗಳೆಂಬ ಆರರ ಮಹತ್ತ್ವವನ್ನು ತಿಳಿಯಬೇಕು. ಯಾವ ಸಂದರ್ಭದಲ್ಲಿ ಯಾವುಯಾವುದನ್ನು ಬಳಸಬೇಕೆಂದು ತಿಳಿದಿರಬೇಕು.

**ಸಪ್ತ ಹಿತ್ವಾ ಸುಖೀ ಭವ:** ಏಳನ್ನು ಬಿಟ್ಟು ಸುಖವಾಗಿರಬೇಕು. ಹೇಯವಾದ ಆ ಏಳು ಯಾವುದು? ಎಂದರೆ: ಸ್ತ್ರೀ, ಜೂಜು, ಬೇಟೆ, ಮದ್ಯ, ಕಠೋರವಚನ, ಕಠಿಣಶಿಕ್ಷೆ, ಅನ್ಯಾಯಧನಾರ್ಜನೆಗಳು—ಇವುಗಳನ್ನು ವರ್ಜಿಸಬೇಕು. ಇಷ್ಟನ್ನು ಮಾಡಿದರೆ ರಾಜನೂ ಪ್ರಜೆಗಳೂ ಸುಖವಾಗಿರುತ್ತಾರೆ.

**ಮಾನವನು ಇಂದ್ರಿಯನಿಗ್ರಹದಿಂದ ಸುಖಿಯಾಗಿರಬೇಕು**

# 39. ಗುರುಸೇವೆಯಿಂದ ಜ್ಞಾನಪ್ರಾಪ್ತಿ

ಬುದ್ಧ್ಯಾ ಭಯಂ ಪ್ರಣುದತಿ ತಪಸಾ ವಿಂದತೇ ಮಹತ್।
ಗುರುಶುಶ್ರೂಷಯಾ ಜ್ಞಾನಂ ಶಾಂತಿಂ ಯೋಗೇನ ವಿಂದತಿ॥

*ಮಾನವನು ಭಯವನ್ನು ತನ್ನ ಬುದ್ಧಿಯಿಂದ ನಾಶಮಾಡಿಕೊಳ್ಳುತ್ತಾನೆ, ತಪಸ್ಸಿನಿಂದ ಹೆಚ್ಚಿನ ಉತ್ತಮ ಫಲವನ್ನು ಹೊಂದುತ್ತಾನೆ, ಗುರುಸೇವೆಯಿಂದ ಬ್ರಹ್ಮಾತ್ಮಜ್ಞಾನವನ್ನು ಹೊಂದುತ್ತಾನೆ, ಯೋಗಾಭ್ಯಾಸದಿಂದ ಶಾಂತಿಯನ್ನು ಹೊಂದುತ್ತಾನೆ.*

೧. **ಬುದ್ಧ್ಯಾ ಭಯಂ ಪ್ರಣುದತಿ:** ಬುದ್ಧಿಯಿಂದ ಭಯವನ್ನು ಕಳೆದುಕೊಳ್ಳುತ್ತಾನೆ. ಮನುಷ್ಯ ಎಂದಮೇಲೆ ಇವನಿಗೆ ಕಳ್ಳರಿಂದ ಭಯ, ರೋಗಾದಿಗಳಿಂದ ಭಯ, ಸರ್ಕಾರದಿಂದ ಭಯ, ಅಪಘಾತದಿಂದ ಭಯ, ಶತ್ರುಗಳಿಂದ ಭಯ, ದಾಯಾದಿಗಳಿಂದ ಭಯ; ಹೀಗೆ ಒಂದಲ್ಲಾ, ಹತ್ತಲ್ಲಾ, ನೂರಾರು ರೀತಿಯ ಭಯಗಳು ಇದ್ದೇ ಇರುತ್ತವೆ. ಇಂಥ ಭಯಗಳನ್ನೆಲ್ಲ ಈ ಪ್ರಚಂಡ ಮಾನವನು ತನ್ನ ಬುದ್ಧಿಯಿಂದ, ತನ್ನ ವಿವೇಕಸಾಮರ್ಥ್ಯದಿಂದ ಹೇಗೋ ಪರಿಹರಿಸಿಕೊಳ್ಳಬಲ್ಲನು.

೨. **ತಪಸಾ ವಿಂದತೇ ಮಹತ್:** ತಪಸ್ಸಿನಿಂದ ಉತ್ತಮಫಲವನ್ನು ಹೊಂದುತ್ತಾನೆ. ಭಗವಂತನ ಜಪ, ಪಾರಾಯಣ, ಪೂಜಾ, ಹೋಮಹವನಾದಿಗಳೇ ಒಂದು ರೀತಿಯ ತಪಸ್ಸು. ಸತ್ಯ, ಅಹಿಂಸಾ, ತ್ಯಾಗ, ಬ್ರಹ್ಮಚರ್ಯ, ಸದ್ಗುರುಸೇವಾದಿಗಳೂ ತಪಸ್ಸೇ. ಈ ತಪಸ್ಸಿನಿಂದ ಮಾನವನು ಆಯುರಾರೋಗ್ಯಐಶ್ವರ್ಯಾದಿ ಫಲಗಳನ್ನು ಹೊಂದುತ್ತಾನೆ. ಇನ್ನು ಈ ತೀವ್ರತಪಸ್ಸಿನಿಂದ ಅಷ್ಟಸಿದ್ಧಿಗಳನ್ನೂ ಮನುಷ್ಯನು ಪಡೆದುಕೊಳ್ಳುತ್ತಾನೆ.

೩. **ಗುರುಶುಶ್ರೂಷಯಾ ಜ್ಞಾನಂ ವಿಂದತಿ:** ಸದ್ಗುರುಸೇವೆಯಿಂದ ಮಾನವನು ಲೌಕಿಕಜ್ಞಾನವನ್ನೂ ಆತ್ಮಜ್ಞಾನವನ್ನೂ ಹೊಂದುತ್ತಾನೆ. ಮಾನವರಿಗೆ ಯಾವುದೇ ವಿದ್ಯೆಯು ಬರಬೇಕಾದರೂ ಅವರು ಶ್ರದ್ಧೆಯಿಂದ ಸದ್ಗುರುಸೇವೆಯನ್ನು ಮಾಡಬೇಕು. ವೇದ ಉಪನಿಷತ್ತುಗಳಲ್ಲಿ ಸದ್ಗುರುಸೇವೆಯ ಮಹಿಮೆಯನ್ನೂ ಫಲಗಳನ್ನೂ ತಿಳಿಸಿದೆ. ಸದ್ಗುರುಸೇವೆಯಿಂದ ಬಂದ ಜ್ಞಾನವೇ ಪರಿಪೂರ್ಣಜ್ಞಾನವಾಗುತ್ತದೆ. ಇಂದ್ರ ಮುಂತಾದ ದೇವತೆಗಳೂ ಸದ್ಗುರುಸೇವೆಯನ್ನು ಮಾಡಿಯೇ ಬ್ರಹ್ಮಜ್ಞಾನವನ್ನು ಹೊಂದಿರುತ್ತಾರೆ.

೪. **ಯೋಗೇನ ಶಾಂತಿಂ ವಿಂದತಿ:** ಅಷ್ಟಾಂಗಯೋಗಾನುಷ್ಠಾನದಿಂದ ಸಾಧಕನು ಆತ್ಮಜ್ಞಾನವನ್ನೂ ಶಾಂತಿಯನ್ನೂ ಹೊಂದುತ್ತಾನೆ.

**ಸಮಾಧಿಯೋಗಾನುಷ್ಠಾನದಿಂದ ಶಾಂತಿಯನ್ನು ಹೊಂದಬೇಕು**

# 40. ಗುರುನಮಸ್ಕಾರದಿಂದ ನಾಲ್ಕು ಫಲಗಳು

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ।
ಚತ್ವಾರಿ ಸಂಪ್ರವರ್ಧಂತೇ ಆಯುರ್ವಿದ್ಯಾ ಯಶೋ ಧನಮ್॥

*ಗುರುಹಿರಿಯರಿಗೆ ಭಕ್ತಿಯಿಂದ ನಮಸ್ಕಾರಮಾಡುವವನಿಗೂ ಮತ್ತು ಗುರುಹಿರಿಯರ ಸೇವೆಯನ್ನು ಮಾಡುವವನಿಗೂ ಆಯುಷ್ಯ, ವಿದ್ಯಾ, ಯಶಸ್ಸು ಮತ್ತು ಸಂಪತ್ತುಗಳು ಹೆಚ್ಚುಹೆಚ್ಚಾಗಿ ಪ್ರಾಪ್ತವಾಗುತ್ತವೆ.*

ಪ್ರತಿಯೊಬ್ಬ ಮಾನವನೂ ಬಯಸುವ ಫಲವೆಂದರೆ ಆಯುಷ್ಯ! ತಾನು ದೀರ್ಘಾಯುಷ್ಮಂತನಾಗಿ ಆರೋಗ್ಯವಂತನಾಗಿ ಆನಂದದಿಂದ ಬಾಳಬೇಕೆಂದೇ ಪ್ರತಿಯೊಬ್ಬ ಮನುಷ್ಯನೂ ಬಯಸುತ್ತಾನಲ್ಲವೇ? ಮಕ್ಕಳು, ಮೊಮ್ಮೊಕ್ಕಳು, ಮರಿಮಕ್ಕಳೊಂದಿಗೆ ತಾನೂ ನೂರುವರ್ಷಗಳ ಕಾಲ ಬದುಕಿರಬೇಕೆಂದು ಸಾಮಾನ್ಯವಾಗಿ ಪ್ರತಿಯೊಬ್ಬ ಮಾನವನೂ ಬಯಸುತ್ತಾನೆ. ತಾನು ಶತಮಾನ ವರ್ಷಗಳ ಕಾಲ ಬದುಕಿದ್ದು ಕನಕಾಭಿಷೇಕವನ್ನೂ ತನ್ನ ಮರಿಮಗನ ಕೈಗಳಿಂದ ಮಾಡಿಸಿಕೊಳ್ಳಬೇಕೆಂದೂ ಎಲ್ಲರೂ ಬಯಸುತ್ತಾರೆ. ಇದು ಸಾಧ್ಯವೇ? ಎಂದರೆ, ಖಂಡಿತಾ ಸಾಧ್ಯ ಎನ್ನುತ್ತಾನೆ ಮಹಾತ್ಮನಾದ ವಿದುರ.

ಸರಿ, ಸುಮ್ಮನೇ ಕಂಬದಂತೆ, ಅಥವಾ ಬಂಡೆಯಂತೆ ನೂರು ವರ್ಷ ಬದುಕಿದರೆ ಸಾಕೇ? ಎಂದರೆ, ಸಾಕಲ್ಲ, ಮತ್ತೇನೆಂದರೆ ಅದರ ಜೊತೆಗೆ ವಿದ್ಯಾವಂತನೂ ಆಗಿ ಶತಮಾನವರ್ಷಗಳ ಕಾಲ ಬದುಕಿರಬೇಕು. ಮನುಷ್ಯನಿಗೆ ಇರುವ ಸಂಪತ್ತೆಂದರೆ ವಿದ್ಯಾ. ಏಕೆಂದರೆ ವಿದ್ಯೆಯು ಇಲ್ಲವೆಂದಾದರೆ, ಅಂಥವನು **ವಿದ್ಯಾವಿಹೀನಃ ಪಶುಃ** ಎಂಬಂತೆ ಪಶುವಾಗಿ ಬಿಡುತ್ತಾನೆ. ಆದ್ದರಿಂದ ವಿದ್ಯಾವಂತನಾಗಿ ದೀರ್ಘಾಯುಷಿಯಾಗಿರಬೇಕು.

ಇವೆರಡರ ಜೊತೆಗೆ ಯಶೋವಂತನೂ ಆಗಿಬಿಟ್ಟರಂತೂ ಎಷ್ಟು ಆನಂದ! ಅವನ ಹೆಸರು ಎಲ್ಲೆಡೆಗಳಲ್ಲಿಯೂ ಕೇಳಿಸುವಂತಾಗಬೇಕು. ಇವುಗಳ ಜೊತೆಗೇ ಹಣವೂ ಬೇಕಲ್ಲವೇ? ಏಕೆಂದರೆ ಸಂಪತ್ತಿಲ್ಲದ, ಹಣವಿಲ್ಲದ ಮನುಷ್ಯನನ್ನು ಸಮಾಜವು ತಿರಸ್ಕರಿಸುತ್ತದೆ. ಆದ್ದರಿಂದ ಮನುಷ್ಯನಿಗೆ ಸಾಕಷ್ಟು ಹಣವೂ ಬೇಕೇ ಬೇಕು. ಸರಿ, ಈ ನಾಲ್ಕೂ ಫಲಗಳು ಅಂದರೆ ದೀರ್ಘಾಯುಷ್ಯ, ವಿದ್ಯೆ, ಯಶಸ್ಸು ಹಾಗೂ ಧನಗಳು ಒಬ್ಬ ಮನುಷ್ಯನಿಗೆ ಹೇಗೆ ಬರುತ್ತವೆ? ಎಂದರೆ, ಗುರುಹಿರಿಯ ರಿಗೆ ಪ್ರತಿದಿನವೂ ನಮಸ್ಕಾರಗಳನ್ನು ಮಾಡುತ್ತಾ ಸೇವೆಯನ್ನೂ ಮಾಡುತ್ತಿದ್ದರೆ ಅಂಥವರಿಗೆ ಈ ನಾಲ್ಕೂ ಫಲಗಳು ಲಭಿಸುತ್ತವೆ ಎಂದು ತಿಳಿಯಬೇಕು.

**ಗುರುಹಿರಿಯರ ಸೇವೆಯಿಂದ ಸಕಲಸಂಪತ್ತುಗಳೂ ಪ್ರಾಪ್ತವಾಗುತ್ತವೆ**

## ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾರವರ ವೇದಾಂತ ಗ್ರಂಥಗಳು

1. "ವಿವೇಕಭಾಸ್ಕರ"
2. "ಶಾಂಕರ ಸಂವತ್ಸರ"
3. "ವೇದಾಂತ ಸಂವತ್ಸರ"
4. "ಗೀತಾ ಸಂವತ್ಸರ"
5. "ಸುಭಾಷಿತ ಸಂವತ್ಸರ"
6. "ಪ್ರಬೋಧ ಚಿಂತಾಮಣಿ"
7. "ಜ್ಞಾನಾಮೃತಬಿಂದು"
8. "ಗೀತೋಪದೇಶಾಮೃತ"
9. "ಜರ್ಮನಿಯಲ್ಲಿ ಶರ್ಮರು"
10. ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾ
11. "ವ್ಯಾಸ ಪೂರ್ಣಿಮಾ"
12. "ಕೇನ ರಸಾಯನ"
13. "ಜೀವನ್ಮುಕ್ತ ಚತುಷ್ಟಯ"
14. "ಶಿವರಾತ್ರಿ"
15. "ನವೋಪನಿಷದಃ"
16. "ಶಾಂತಿಮಂತ್ರಗಳು"
17. "ವೇದಮಹಿಮೆ"
18. "50 Reflections on Morals"
19. "ಪೀಯೂಷ ಧಾರಾ"
20. "ಆದಿಗುರು ಶಂಕರ"
21. "48 'ಅಷ್ಟಕ' ಸ್ತೋತ್ರಗಳು"
22. "ಕನ್ನಡ ಶಂಕರ"
23. "ಆರಾಧನ ಸಂದೇಶ"
24. "ಸರಳ ರಮಣ"
25. "ನ ಹಿ ಜ್ಞಾನೇನ ಸದೃಶಂ"
26. "ಉಪದೇಶಸಿಂಚನಂ"
27. "ಸುದಿನಂ"
28. "ಶಂಕರಜಯಂತೀ"
29. "ಬಾಲರಾಮಾಯಣಂ"
30. "ಸಂದೇಶಾಮೃತ"
31. "ವಿಭೂತಿರೂಪಿಕೃಷ್ಣ"
32. "ಅಧ್ಯಾರೋಪಾಪವಾದ"
33. "ಶಂಕರ Ph.D."
34. "ಗೌಡಪಾದಾಮೃತ"
35. "ವೇದಾಂತಮಕರಂದ"
36. "ಶ್ರೀರಮಣಸುಧಾ"
37. "ಧರ್ಮ-ವೇದ-ಬ್ರಹ್ಮ"
38. "ಸದ್ಗುರೂಪಾಸನಂ"
39. "ಜನ್ಮಾಂತರ"
40. "ಗೀತಾಕಲ್ಪತರು"
41. "ಮಹರ್ಷಿಗಳು"
42. "ಉಪನಯನಂ"
43. "ಔಪನಿಷದ ಪುರುಷ"
44. "ಸಂಸ್ಕೃತ ವೈಭವ"
45. "ತೈತ್ತಿರೀಯದ ತಿರುಳು"
46. "ರಾಮಾಂಜನೇಯ"
47. ವೇದಾಂತದಲ್ಲಿನ ಪದಗಳೂ ಅರ್ಥಗಳೂ
48. "ತತ್ತ್ವಮಸಿ"
49. "ಬ್ರಹ್ಮಜ್ಞಾನಫಲಂ"
50. "ಜ್ಞಾನಸಾಧನಗಳು"
51. "108 'ಅಷ್ಟಕ' ಸ್ತೋತ್ರಗಳು"
52. "ಚತುಷ್ಟಯ ಸಂಗ್ರಹ"
53. "ಸಂಗ್ರಾಹಕ ಶ್ಲೋಕಗಳು"
54. "ಶ್ರೀಶ್ರೀಗಳ ಸಂಶೋಧನೆ"
55. "ಮಹರ್ಷಿಗಳ 'ಅಷ್ಟಕ' ಸ್ತೋತ್ರಗಳು"
56. "ಶಾಂಕರ ಮಕರಂದ"
57. "ನೀತಿ ಶ್ಲೋಕಗಳು"
58. "ಕೈವಲ್ಯೋಪನಿಷತ್"
59. "ವಿವೇಕ ರತ್ನ"
60. "ಗುರುಶಿಷ್ಯ ಸಂಬಂಧ"
61. "ಲಕ್ಷಣ ಶ್ಲೋಕಗಳು"
62. "ಶ್ರೀರಮಣರ ಉಪದೇಶಸಾರ"
63. "ಅಜ್ಞಾನ ವಿಮುಕ್ತಿ"
64. "ವಂದೇ ಶಂಕರಸದ್ಗುರುಮ್"
65. "ಚತುಸ್ಸೂತ್ರೀಭಾಷ್ಯಸಾರ"
66. ಶ್ರೀರಮಣಮಹರ್ಷಿಗಳ "ಸದ್ದರ್ಶನಮ್"
67. "ತಸ್ಮೈ ಶ್ರೀಗುರವೇ ನಮಃ"
68. "ಗೀತೋಪನಿಷತ್"
69. "ಪ್ರಸ್ಥಾನತ್ರಯಂ"
70. "ಪ್ರಥಮ ಪುಸ್ತಕಂ"
71. "ನನ್ನ ಗುರುಕುಲವಾಸ"
72. "ವೇದಾಂಗಗಳು"
73. "ಗೀತಾಜಯಂತೀ"
74. "ಶಂಕರಹೃದಯಂ"
75. "ಮಕ್ಕಳಿಗಾಗಿ ಸ್ತೋತ್ರಗಳು"
76. "ಗೀತೆಯಲ್ಲಿ ಗುಣವಿಮರ್ಶೆ"
77. "ಸದ್ಗುರುಭಾಸ್ಕರ"
78. "ಶಾಂಕರಭಾಷ್ಯಾಮೃತಂ"
79. "ಶ್ರೀಸುರೇಶ್ವರರ ಸಿಂಹಗರ್ಜನೆ"
80. "ಉಪಮಾ ಕಾಳಿದಾಸಸ್ಯ"
81. "ಪ್ರಣವೋಪಾಸನಂ"
82. "ಕವಿಮುನಿ ಕಂಡ ಶಿವ"
83. "ಬ್ರಾಹ್ಮೀಸ್ಥಿತಿಗೆ 40 ಸೋಪಾನಗಳು"
84. "ಶಾಂಕರಬೋಧಾಮೃತಂ"

| | | | |
|---|---|---|---|
| 85. | "ಪ್ರಬೋಧ ಶ್ಲೋಕಗಳು" | 92. | "ಸುರೇಶ್ವರ ಸಂವತ್ಸರ" |
| 86. | "ವೇದಾಂತಡಿಂಡಿಮಸಾರ" | 93. | "70ರ ವೀರವೇದಾಂತಿ" |
| 87. | "ಶತಕತ್ರಯಸಾರ" | 94. | "ತುರೀಯಂ ಪದಂ" |
| 88. | "ಪಂಚಕ ಪಂಚಕಂ" | 95. | "ಬ್ರಹ್ಮಚರ್ಯವ್ರತಂ" |
| 89. | "ನೈಷ್ಕರ್ಮ್ಯಸಿದ್ಧಿಸಾರ" | 96. | "ಗೀತೆಯಲ್ಲಿ ಸಾಂಖ್ಯಯೋಗ" |
| 90. | "ಈಶಾವಾಸ್ಯಮಿದಂ ಸರ್ವಂ" | 97. | "ಶ್ರವಣದ ಮಹತ್ತ್ವ" |
| 91. | "ಮಾತೃದೇವೋ ಭವ" | 98. | "ವಿದುರನೀತಿಸಾರ" |

## ವೇದಾಂತ ಪ್ರವಚನಗಳು M.P. 3 ಸಿ.ಡಿ.ಗಳಲ್ಲಿ ಲಭ್ಯವಿವೆ

1. ದಶೋಪನಿಷತ್ತುಗಳ ಸಂದೇಶಗಳು (10 ಗಂಟೆಗಳು)
2. ಬ್ರಹ್ಮಸೂತ್ರಶಾಂಕರಭಾಷ್ಯ, ಚತುಸ್ಸೂತ್ರೀಭಾಷ್ಯ (56 ಗಂಟೆಗಳು)
3. ಶ್ವೇತಾಶ್ವತರೋಪನಿಷತ್ ಶಾಂಕರಭಾಷ್ಯಂ (108 ಗಂಟೆಗಳು)
4. ಐತರೇಯೋಪನಿಷತ್ ಶಾಂಕರಭಾಷ್ಯಂ (48 ಗಂಟೆಗಳು)
5. ಈಶಾವಾಸ್ಯೋಪನಿಷತ್ ಶಾಂಕರಭಾಷ್ಯಂ (28 ಗಂಟೆಗಳು)
6. ಅಧ್ಯಾರೋಪ ಅಪವಾದಪ್ರಕ್ರಿಯೆ (90 ನಿಮಿಷಗಳು)
7. ನಮಗೆ ಇಂದು ವೇದಾಂತ ಬೇಕೇ? (90 ನಿಮಿಷಗಳು)
8. ಮುಂಡಕೋಪನಿಷತ್–ಶಾಂಕರಭಾಷ್ಯಮ್ (45 ಗಂಟೆಗಳು)
9. ಕಾಠಕೋಪನಿಷತ್–ಶಾಂಕರಭಾಷ್ಯಮ್ (69 ಗಂಟೆಗಳು)
10. ದ್ವಾದಶವೇದಾಂತರತ್ನಮಾಲಿಕಾ (13 ಗಂಟೆಗಳು)
11. ದಶೋಪನಿಷತ್ತುಗಳ ಪ್ರವಚನಗಳು (DVD 10 ಗಂಟೆಗಳು)
12. अध्यारोपापवादमहिमा (60 ನಿಮಿಷ)
13. Avasthaatraya Prakriya (60 Minutes)
14. माण्डूक्यरहस्यविवृति (60 ನಿಮಿಷ)
15. ಭಗವದ್ಗೀತೋಪನ್ಯಾಸ (DVD)
16. ತೈತ್ತಿರೀಯ, ಪುರುಷಸೂಕ್ತ ಮಂತ್ರ ಪಠನ
17. ಬ್ರಹ್ಮಸೂತ್ರಸಾರ (DVD)
18. Power of Shaanthi Manthras
19. Essence of the Maandukya Upanishad
20. "ಕನ್ನಡ ಶಂಕರ"—ಶ್ರೀ ಶ್ರೀ ಸ್ವಾಮಿಗಳವರು
21. Sri Shankara Bhagavathpaadaachaarya
22. ಮಾಂಡೂಕ್ಯೋಪನಿಷತ್‌ಸಾರ
23. 60 ಶಾಂಕರಭಾಷ್ಯಪ್ರವಚನಗಳ ಸಾರ
24. ಶ್ರೀಶಂಕರರ ನಿರ್ವಾಣಷಟ್ಕಮ್
25. ವ್ಯಾಸಪೂಜಾ, ಗುರ್ವಷ್ಟಕಮ್
26. ತೈತ್ತಿರೀಯೋಪನಿಷತ್ ಶಾಂಕರಭಾಷ್ಯಂ (120 ಗಂಟೆಗಳು)

---

**ವಿವರಗಳಿಗೆ : ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾ**
**ದೂರವಾಣಿ : 080-2639 6786; ಮೊಬೈಲ್ : 98862 81622**




“ಬ್ರಹ್ಮಚರ್ಯವ್ರತಂ”-95 ಕೃತಿರತ್ನದ ಲೋಕಾರ್ಪಣ ಸಮಾರಂಭದಲ್ಲಿ ಶ್ರೀಯುತ ಎಸ್. ಅಶ್ವತ್ಥನಾರಾಯಣ,
ವೇ॥ ವಿದ್ವಾನ್ ಕೆ. ಎಸ್. ಕೃಷ್ಣಜೋಯಿಸ್, ಶ್ರೀ ಎನ್. ಕಾರ್ತಿಕೇಯನ್, ಪ್ರೊ. ರಾಮಚಂದ್ರ ಅತ್ತಿಗನಾಳ್
ಇವರೊಂದಿಗೆ ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾದಂಪತಿಗಳು; 2-6-2018 ಶನಿವಾರ




“ಪಂಚಕ ಪಂಚಕಂ”-88 ಕೃತಿಯನ್ನು ಲೋಕಾರ್ಪಣೆ ಮಾಡಿದ ಬಳಿಕ
ಶ್ರೀ ಚಂದ್ರಶೇಖರ ಕಾಮತ್‌ರವರು ಮಾತನಾಡುತ್ತಿದ್ದಾರೆ; 23-8-2017 ಬುಧವಾರ

